# ಪಂಚಮ

ಸಂಚಿಕೆ : 12    ಜೂನ್ 5–20, 1983    ಬೆ... ...ಮೈಸೆ    ಪುಟ : 12    ಸಂಪುಟ : 7




# ನೊಂದರೆದೆಯ ಗಾಯ: ಬಾಳುಪೇಟೆಯ ಘಟನೆಗಳು

**ಕರ್ನಾಟಕದ ರೈತ ಚಳುವಳಿ ಮತ್ತು ದಲಿತ ಚಳುವಳಿಗಳ ಕೇಂದ್ರವಾಗಿರುವ ಹಾಸನ ಜಿಲ್ಲೆಯಲ್ಲಿ ನಡೆಯುತ್ತಿರುವ ಬಾಳುಪೇಟೆ ವಿದ್ಯಾಮಾನಗಳು ಎಲ್ಲಾ ನೊಂದವರ ಮತ್ತು ಪ್ರಗತಿಪರ ಚಿಂತಕರೆಲ್ಲರ ಮನಸ್ಸಿನ ಗಾಯದಂತೆ ಕಾಡ ತೊಡಗಿದೆ. ಕರ್ನಾಟಕವನ್ನೆಲ್ಲ ಈ ಗಾಯ ಆವರಿಸುವ ಮೊದಲೇ ಇದನ್ನು ವಾಸಿ ಮಾಡಲು ಎಲ್ಲರೂ ಮುಂದಾಗ ಬೇಕಾಗಿದೆ. ಬಾಳುಪೇಟೆಯ ವಿದ್ಯಾಮಾನಗಳ ಬಗ್ಗೆ ಖುದ್ದು ವರದಿ ಇಲ್ಲಿದೆ.**

**—ಸಂಪಾದಕ**

ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನಲ್ಲಿರೊ ಬಾಳ್ಳು ಪೇಟೆಹಾಗೆ ಹೇಳೋದಾದರೆ ಅಂಥಾದೊಡ್ಡ ಊರೇನಲ್ಲ. ಹಾಸನಕ್ಕೆ ಕೇವಲ ಇಪ್ಪತ್ತು ಕಿಲೋ ಮೀಟರ್ ದೂರದಲ್ಲಿದ್ದು ಹಾಸನ ಮಂಗಳೂರು ಹೆದ್ದಾರಿಯಲ್ಲಿರೊ ಈ ಸ್ಥಳ. ಹಾಗಿದ್ದೂ ಹಲವು ವೈಚಿತ್ರ್ಯಗಳನ್ನೊಂದಿದ್ದು ಇಂದು ಹಲವರ ಗಮನ ಸೆಳೆದಿದೆ. ಎಲ್ಲಾ ಕಡೆ ಮಳೆ ಇಲ್ಲದೆ ಗಿಡವೆಲ್ಲಾ ಒಣಗಿ ಕರಕಲಾಗಿದ್ದಾಗ ಈ ಊರು ಅಚ್ಚ ಹಸರೊಳಗೆ ಕೂತಂತೆ ಕಾಣೋದು. ಆದರೆ ಈ ಊರು

## ಕೊಡಗಿನ ಗಣೇಶ್ ದೇವಯ್ಯ ಹರಕೆ

ಡೌಲು – ದಬ್ಬಾಳಿಕೆಗಳಿಗೆ ಕುಡಿಕೆ ಕುಡಿಕೆಗಟ್ಟಲೇ ಹೊನ್ನು ತರುವ ಕಾಫಿಗಿಡಗಳು ಸೀದು ಹೋಗಿದ್ದದು ಹೊರಗಿಂದ ಹೋದ ಬಾಳಾಮಂದಿಗೆ ತಿಳಿದ ವಿಚಾರ. ಇದು ಸ್ಪಷ್ಟವಾಗಿ ಬಾಳುವಿನ ಕಾಫಿತೋಟದ ಶ್ರೀಮಂತ ಒಡೆಯರಿಗೆ ಹೋಲಿಸುವಂಥಾ ಸಂಗತಿ. ಮೇಲುನೋಟಕ್ಕೆ ಸುಸಂಸ್ಕೃತರಾಗಿ, ಸಮಾಜ ಸುಧಾರಕರಾಗಿ, ಜಸೀಸ್ ಸಂಸ್ಕೃತಿಯನ್ನು ಹಬ್ಬಿಸೋಂಥ ಪಕ್ವಾರರಾಗಿ ಕಾಣೋ ಈ ಮಂದಿಯ ಒಳಗಿನ ಕ್ರೌರ್ಯ ಇಂದು ಬಟಾಂಬಯಲಾಗಿದೆ. ಹಲವು ಕಡೆ ಮಳೆಯಾಗಿ ಸೀದೋದ ಧರೆಗೂ ನೊಂದಮನಗಳಿಗೂ ಕುಳಿರಿನ ಹಿತ ತುಂಬಿಕೊಳ್ಳುತ್ತಿರುವಾಗಲೇ ಈ ಊರಿನ ಧರೆಯು ಮಂದಿಯ ಮೈಮನಗಳು ...ಯಲ್ಲಿ ಬೇಯತೊಡಗಿರೋದಕ್ಕೆ ಮೇಲೆ ಹೇಳಲಾಗಿರುವ ಸಂಸ್ಕೃತಿವಂತರಾದ ಕೆಲವೇ ಶ್ರೀಮಂತ ಒಡೆಯಂದರ ಹಮ್ಮು ಕಾರಣವಾಗುತ್ತಿದೆ. ಬಳಸಲಾಗದೇ ಕೊಳೆಯುತ್ತಿರೋ ಕುಡಿಕೆ ಹೊನ್ನನ್ನು ಚೆಲ್ಲಿ ಸರ್ಕಾರವನ್ನು ಕೊಂಡು ಅಭ್ಯಾಸವಿರುವ ಈ ಮಂದಿ, ಮತ್ತೂ ಇದೇ ಆಟ

(2ನೇ ಪುಟಕ್ಕೆ)

ಹಾಸನದ ಸರ್ಕಾರಿ ಆಸ್ಪತ್ರೆಯಲ್ಲಿ ಸಾವು ಬಾಳಿನ ಮಧ್ಯೆ ಒದ್ದಾಡುತ್ತ ನಿಶ್ಯಕ್ತರಾಗಿ ಬಿದ್ದಿರೋ ಬಾಳುಪೇಟೆಯ ಬಿ. ಬಿ. ಸಿದ್ದಯ್ಯನವರ ಸ್ಥಿತಿ ಇಂದು ಗಂಭೀರ ಹಂತ ಮುಟ್ಟಿದೆ. ಹಲ್ಲೆಕೋರರು ಮಚ್ಚು ಗತ್ತಿಗಳನ್ನು ಬಳಸಿ ಇವರನ್ನು ಆಯಕಟ್ಟಿನ ಭಾಗಗಳಲ್ಲಿ ಕಡಿದಿರುವುದರಿಂದ ಟಿಟನಸ್ ರೀತಿಯ ತೊಂದರೆಗಳು ತಲೆದೋರುವ ಸಾಧ್ಯತೆಯ ಬಗ್ಗೆ ಇಲ್ಲಿನ ಡಾಕ್ಟರುಗಳು ಯೋಚಿಸುತ್ತಿದ್ದು ಯಾವ ಭರವಸೆಯನ್ನೂ ಗಾಯಾಳುವಿನ ಬಗ್ಗೆ ಹೇಳಲು ಹಿಂದೂ ಮುಂದೂ ನೋಡುವಂತಾಗಿದೆ. ಮೂಗು, ಬಾಯಿ, ತೋಳು ಬಲದ ತೊಡೆಯ ತುಂಬಾ ಪ್ಲಾಸ್ಟರುಗಳಿಂದ ಕವರ್ ಮಾಡಲಾಗಿದ್ದ ಈತ ದಿಂಬು ಒರಗಿ ಕೂತಿದ್ದರು. ನಾವು ಕಂಡಾಗ ಬೆಡ್‌ಷೀಟಿನ ಒಳಗೆ ಇದ್ದ ತಮ್ಮ ಕೈ ತೆಗೆದು ವಂದನೆಯ ಧಾಟೀಲಿ ಕೈಕುಲುಕಲು ಪ್ರಯತ್ನಿಸಿದ ಇವರು, ಆಗ ತಾನೇ (ಮೇ 28 ರ ರಾತ್ರಿ 8 ಗಂಟೆಗೆ) 107 ನೆ ನಂಬರಿನ ಸೆಕ್ಷನ್ ಪ್ರಕಾರ ಬಂಧಿತರಾಗಿದ್ದ ಮೈಸೂರಿನ ಜೈಲಿಂದ ಬಿಡುಗಡೆಯಾಗಿ ಬಂದಿದ್ದ ತಮ್ಮೂರಿನ ಹನ್ನೊಂದು ಮಂದಿ ಹುಡುಗರಿಗೆ "ಈಗ ಹೋಗೋದು ಬ್ಯಾಡ ಇಲ್ಲೇ ಎಲ್ಲಾರೂ ಉಳೀರಪ್ಪಾ" ಎಂದು ಹೇಳಿ ಊಟಕ್ಕೆ ವ್ಯವಸ್ಥೆ ಮಾಡಲು ತಮ್ಮ ಮಗ ಚಂದ್ರಶೇಖರನಿಗೆ ಹೇಳುತ್ತಿದ್ದರು. ಇಂಥಾ ಸಂದರ್ಭದಲ್ಲೂ ಹೀಗೆ ಗಡಿಬಿಡಿಯಾಗಿ ತಮ್ಮೆಲ್ಲರ ಬಗ್ಗೆ ಯೋಚಿಸೋ ಈ

## ಸಾವುಬಾಳಿನ ನಡುವೆ ಹೋರಾಡುತ್ತಿರುವ ಬಾಳುವಿನ ಸಿದ್ದಯ್ಯ



ಮನುಷ್ಯ ಯಾರಿಗಾದರೂ ಆಸಕ್ತಿ ಹುಟ್ಟಿಸುವಂತೋರು.

ಬಾಳುಪೇಟೇಲಿ ನ್ಯಾಯ ಬೆಲೆ ಅಂಗಡಿಯೊಂದು ಇಟ್ಟು ತಮ್ಮ ಜನಗಳಿಗೆ ಅಲ್ಪ ಸ್ವಲ್ಪ ಸಹಾಯ ಮಾಡಿಕೊಂಡು, ಬುದ್ಧಿ ತಿಳುವಳಿಕೆ ಹೇಳಿಕೊಂಡು, ಎಂಬತ್ತೆರಡರ ಫೆಬ್ರುವರಿಯಲ್ಲಿ ಮೇಲು ಜಾತಿಯ ಕಾಫಿ ತೋಟದ ಒಡೆಯಂದರುಗಳು ದಲಿತರ ಮೇಲೆ ಗಲಾಟೆ ಮಾಡುವ ಸ್ಪಷ್ಟ ಸೂಚನೆಗಳು ಕಂಡಾಗ-ಅವರಲ್ಲಿಗೂ ಹೋಗಿ ಸಮಾಧಾನ ಶಾಂತಿಯ ಮಾತುಗಳನ್ನು ಹೇಳಿಕೊಂಡು ಪುಟಪುಟನೆ ಓಡಾಡಿಕೊಂಡಿದ್ದ ನಲವತ್ತೈದು ವರ್ಷದ ತೆಳ್ಳನೆಯ ಎತ್ತರವಾದ ಈ ಮನುಷ್ಯನನ್ನು ಹಲ್ಲೆಕೋರರು ಮಾರಣಾಂತಿಕವಾದ ರೀತೀಲಿ ಹಲ್ಲೆ ಮಾಡಿದರು ಯಾಕೆ ?

(2ನೆಯ ಪುಟಕ್ಕೆ)

# ಸಾವು-ಬಾಳಿನ ನಡುವೆ ಬಾಳುಪೇಟೆಯ ಸಿದ್ಧಯ್ಯ

(ಮೊದಲ ಪುಟದಿಂದ)

ಹೇಳಿದಾಗೆ ಕೇಳಿಕೊಂಡು ಬಿದ್ದಿರೋ ಗುಲಾಮರ ನಡುವೆ ಸ್ವಾಭಿಮಾನವ ಬೆಳೆಸಲು ಪ್ರಯತ್ನಿಸುವ ಸಿದ್ದಯ್ಯನಂತವರು ಬೋಲು ಜಾತಿಯವರ ದೃಷ್ಟೀಲಿ ಎಂದಿಗೂ ತಲೆನೋವೇ. ಇದರ ಜೊತೆ ಒಂದು ಸಣ್ಣ ಘಟನೆ ಸಿದ್ದಯ್ಯನವರ ಮೇಲಿ ಹಲ್ಲೆ ನಡೆದ ಒಂದುದಿವಸಕ್ಕೆ ಮೊದಲು ನಡೆದಿತ್ತು. ಮೇ 19ರ ಮಧ್ಯಾಹ್ನ ಸಮಯ ಸ್ವಂತ ವ್ಯಾನಿಟ್ಟುಕೊಂಡು ಬಾಡಿಗೆಗೆ ಹೋಗುವ ನಂಜಪ್ಪ ಪ್ರಯಾಣಿಕರ ಬಿಡಲು ಬಾಳುವಿನ ದಲಿತ ಕಾಲೋನಿಗೆ ಹೋದ. ಈ ಹಿಂದೆ ದಲಿತರ ಮೇಲೆ ನಡೆದ ಹಲ್ಲೆಗಳಲ್ಲಿ ಪ್ರಮುಖ ಪಾತ್ರಧಾರಿಯೂ ಆಗಿದ್ದ ಇವನನ್ನು ಇಲ್ಲಿನ ಯುವಕರು ತರಾಟೆಗೆ ತೆಗೆದುಕೊಂಡರು. ಮಾತಿಗೆ ಮಾತು ಬೆಳೆಯಿತು. ನಂಜಪ್ಪ ಎಗರಾಡಿ ಜಾತಿ ಹೆಸರಿಡಿದು ಹಿಗ್ಗಾ ಮುಗ್ಗಾ ಬೈದ. ಸರಿಯೇ ಇಲ್ಲಿನ ಯುವಕರು ಈತನ ಮೇಲೆ ಹಲ್ಲೆ ಮಾಡಿದರು. ಊರಲ್ಲಿ ಕೆಟ್ಟದಾಗಿ ಪ್ರಚಾರ ಮಾಡಿದ ನಂಜಪ್ಪನ ಮಾತಿಂದ ಉದ್ರೇಕಗೊಂಡ ಸವರ್ಣೀಯರು ಮತ್ತೆ ದಲಿತರ ಮೇಲೆ ಹಲ್ಲೆ ಮಾಡಲು ಮುಂದಾದರು. ನಂಜಪ್ಪನ ಮೇಲೆ ಹಲ್ಲೆ ಮಾಡುವಾಗ ಪ್ರಮುಖ ಪಾತ್ರ ವಹಿಸಿದ್ದ ಸಿದ್ದಯ್ಯನವರ ಮಗ ಚಂದ್ರಶೇಖರನಿಗಾಗಿ ಹುಡುಕಾಟ, ಈತ ಸಿಗದಿದ್ದಾಗ ಎರಡೊಂದು ಕಾರಣಗಳಿಗಾಗಿ ಸಿದ್ದಯ್ಯನವರ ಮೇಲೆ ಹಲ್ಲೆ.

ಮೇ 20ರ ಸರಿಸುಮಾರು ಮಧ್ಯಾಹ್ನ 12-30ರ ಸಮಯ. ಹಾಸನದಿಂದ ಕಾಡುಮನೆಯ ಕಡೆಗೆ ಹೊರಟ ಕೆ. ಎಸ್. ಆರ್. ಟಿ. ಸಿ. ಬಸ್ಸಲ್ಲಿ ಕೂತು ನ್ಯಾಯ ಬೆಲೆಯ ಅಂಗಡಿಗಾಗಿ ದವಸ ಕೊಂಡು ಬರಲು ಸಿದ್ದಯ್ಯ ತಮ್ಮ ಸಂಬಂಧಿ ಹುಡುಗನೊಂದಿಗೆ ಹೊರಟಿದ್ದರು. ಬಸ್ಸಿನ ಹಿಂದಲ ಸೀಟಲ್ಲಿ ಬಾಗಿಲ ಪಕ್ಕದೊಳಗೆ ಕೂತಿದ್ದ ಸಿದ್ದಯ್ಯನವರ ಪಕ್ಕದಲ್ಲೇ ರಮೇಶ ಬಾಗೆ ಎಂಬುವರೂ ಕೂತು ಸಹಜ ಮಾತುಕತೆ ನಡೆಸಿದ್ದರು. ಬಸ್ಸು ಬಾಳ್ಳುಪೇಟೆ ಬಿಟ್ಟು ಒಂದೂವರೆ ಕಿ. ಮೀ. ಹೋಗಿರಬಹುದು ಎಂಬಾಗ ಕಾರೊಂದು ಬಂದು, ಬಸ್ಸನ್ನು ಅಡ್ಡಗಟ್ಟುವಂತೆ ಮಾಡಿ ನಿಲ್ಲಿಸಿತ್ತು. ಕಾರಿಂದ ಇಳಿದು ಬಂದ ಕಾಡುಗದ್ದೆ ರುಮಣ್ಣನ ಮಗ ವಿಶ್ವನಾಥ ಬಸ್ಸತ್ತಿ ಫೂಟ್‌ಬೋರ್ಡಲ್ಲೇ ನಿಂತ. ಬಸ್ಸು ಕುಂಬಾರಗಟ್ಟೆಯ ಹತ್ತಿರಕ್ಕೆ ಬರುತ್ತಿದ್ದಾಗ ಈ ವ್ಯಕ್ತಿ 'ಬಸ್ ನಿಲ್ಸಿ, ಇಲ್ಲೇ ಇಳೀಬೇಕು' ಎಂದು ಜೋರಾಗಿ ದಾಂದಲೆ ಮಾಡಿದ್ದರಿಂದ, ಬಸ್ಸು ನಿಂತಿತು. ನಿಂತ ತಕ್ಷಣವೇ ಸಿದ್ದಯ್ಯನವರ ಪಕ್ಕದಲ್ಲಿ ಕೂತಿದ್ದ ರಮೇಶ, ಇವರನ್ನೂ ಕೆಳಕ್ಕೆ ದಬ್ಬಿಕೊಂಡು ಬಂದ. ತಕ್ಷಣವೇ ಮಚ್ಚುಗತ್ತಿಯ ತೆಗೆದು ವಿಶ್ವನಾಥ ಸಿದ್ದಯ್ಯನವರ ಮೇಲೆ ಎರಗಿದ. ರಮೇಶ ಬಸ್ಸಿನ ಬಾಗಿಲಲ್ಲಿ ನಿಂತು 'ಯಾರಾದ್ರೂ ಇಳಿದು ಬಂದ್ರೆ ಕೊಚ್ಚಾಕಿಬಿಡ್ತೀನಿ' ಎಂದು ಮಚ್ಚುಗತ್ತಿಯ ಝಳಪಿಸುತ್ತಿದ್ದ. ಸಿದ್ದಯ್ಯನವರ ಕುತ್ತಿಗೆಯ ಹಿಡಿದು ಅಲ್ಲಿಗೆ ಗುರಿಯಿಟ್ಟು ಮಚ್ಚುಗತ್ತಿಯಿಂದ ವಿಶ್ವನಾಥ ಹೊಡೆದನಾದರೂ, ಸಿದ್ದಯ್ಯ ತಕ್ಷಣ ಕುತ್ತಿಗೆಯ ಎತ್ತಿದುದರಿಂದ ಏಟು ಮೂಗನ್ನೂ ಸವರಿಕೊಂಡು ಮುಂಬಾಯಿಯನ್ನು ಕತ್ತರಿಸಿತು. ಭುಜವನ್ನು ಕತ್ತರಿಸುವ, ತೊಡೆಯನ್ನು ಕತ್ತರಿಸಲು ಬಿದ್ದ ಏಟುಗಳ ಕೊರತೆಯು ಕಮ್ಮಿಯಾಗಿಯೋ ಏನೋ ಭುಜದಿಂದ ಬಲದ ತೋಳು ಬೇರೆಯಾದ-ಶರೀರದ ಬಲದ ತೊಡೆ ಮೊಣಕಾಲುಗಳು ಬೇರೆಯಾಗದೆ ನೇತಾಡಿಕೊಂಡು ಉಳಿದವು. ಸಿದ್ದಯ್ಯ ಪ್ರಜ್ಞೆ ತಪ್ಪಿ ಬೀಳುವಷ್ಟರಲ್ಲಿ ಮುಂದುಗಡೆಯಿಂದ ಬಸ್ಸಿನ ಡ್ರೈವರ್ ಇಳಿದು ಓಡಿ ಬಂದ. ವಿಶ್ವನಾಥ್, ರಮೇಶ ಅಷ್ಟರಲ್ಲಿ ತೋಟದ ಮೇಲೆ ಪೇರಿಕಿತ್ತು ಯಾರ ಕೈಗೂ ಸಿಗದಷ್ಟು ರಭಸದಿಂದ ಓಡಿದ್ದರು. ಅದೇ ಬಸ್ಸಲ್ಲಿ ಸಿದ್ದಯ್ಯನವರನ್ನು ಸಕಲೇಶಪುರದ ಆಸ್ಪತ್ರೆಗೆ ಕೊಂಡೊಯ್ದು ಮತ್ತೆ ತಕ್ಷಣ, ಅಲ್ಲಿಂದ ಹಾಸನದ ದೊಡ್ಡಾಸ್ಪತ್ರೆಗೆ ತಂದು ಸೇರಿಸಲಾಯಿತು. ನೇತಾಡುತ್ತಿದ್ದ ಮೂಗನ್ನು ಹೊಲೆದು, ಹರಿದುಹೋಗಿದ್ದ ಮೇಲುತುಟಿಯ ಮೀಸೆಯ ಭಾಗವನ್ನು ಹೊಲೆದು ಅಲ್ಲಾಡುವ ಹಲ್ಲಿನ ಜತೆ ಕೊಂಚವಾದರೂ ಸರಿಯಾಗುವಂತೆ ಮಾಡಲು ಇಲ್ಲನ ಡಾಕ್ಟರರು ಪ್ರಯತ್ನಿಸುತ್ತಿದ್ದಾರೆ. ಬಲದ ತೋಳು, ಬಲದ ತೊಡೆಯ ತುಂಬಾ ಪ್ಲಾಸ್ಟರುಗಳಿಂದ ಸುತ್ತಿಬಿದ್ದಿರುವ ಸಿದ್ದಯ್ಯ ಶಾಂತವಾಗಿ ತಮ್ಮ ಸ್ವಾಭಿಮಾನ ಹೋರಾಟ ಮುಂದುವರಿಸಲು ಮನಸ್ಸು ಮಾಡಿದ್ದಾರೆ. ಯುವಕರಿಗೆ ಇದ ಹೇಳುತ್ತಿದ್ದಾರೆ.

## ನೊಂದವರೆದೆಯ ಗಾಯ: ಬಾಳುಪೇಟೆ ಘಟನೆ

(ಮೊದಲ ಪುಟದಿಂದ)

ಮುಂದುವರಿಸಿ ದಲಿತರ ಎದೆಗಳಿಗೆ ದಿವಸೇ ದಿವಸೇ ಶೂಲಗಳ ನೆಡುತ್ತಲೆ ಹೊಂಟಿದ್ದಾರೆ. ದಲಿತರ ಪಾಲಿಗೆ ಶೂಲಗಳಾಗಿ ಬಂದ ಸಂಗತಿಗಳು ಒಂದಲ್ಲ ಹತ್ತು ಹಲವು! ಎಂಬತ್ತು ಮೂರರ ಫೆಬ್ರುವರಿಯಿಂದ ಮೇ ತಿಂಗಳ ಕೊನೇಲೂ ಸತತ ಒದಗಿ ಬರುತ್ತಲೆ ಇರುವಂಥವು.

### ಅಸ್ಪೃಶ್ಯತೆ ಆಚರಣೆ

ಫೆಬ್ರುವರಿ 28ರ ಬೆಳಗ್ಗೆ ಹತ್ತುಗಂಟೆ ಸಮಯ. ಬಾಳ್ಳುಪೇಟೆಯ ಜೆ. ಪಿ. ನಗರದ ದಲಿತ ಹುಡುಗ ಸಾರ್ವಜನಿಕ ಕೆರೆಯಲ್ಲಿ ತೆಗೆದಿದ್ದ ಬಾವಿಲಿ ನೀರು ಸೇದಲಿದ್ದ. ಇದನ್ನು ಕಂಡ ಸವರ್ಣೀಯ ಪೂವಯ್ಯ ಎಂಬ ವಯಸ್ಸಾದ ವ್ಯಕ್ತಿ ತಡೆದ. ಲಕ್ಷ್ಮಣ ಇದನ್ನು ಪ್ರತಿಭಟಿಸಿದಾಗ, ಪೂವಯ್ಯ "ಹೊಲೇರಿಗೆ ಇಲ್ಲಿ ನೀರು ಸೇದಲು ಬಿಡೊಲ್ಲ" ಎಂದು ರೇಗಾಡಿ ಬೈದ. ದಲಿತ ಯುವಕ ಈತನನ್ನು ನೂಕಿ ಮನೆ ಕಡೆ ಹೊರಟ. ಬಾಳುಪೇಟೆಯ ಪೆಟ್ರೋಲ್ ಬಂಕ್ ಬಳಿ ಮಧ್ಯಾಹ್ನ ಒಂದು ಗಂಟೆಯಲ್ಲಿ ಮೇಲೆ ಹೇಳಲಾದ ಪೂವಯ್ಯನ ಮಕ್ಕಳಾದ ಶ್ರೀಧರ- ಮುತ್ತಪ್ಪ- ಮಂಜಪ್ಪ ಮುಂತಾದವರು ಚಾಕು ಮತ್ತು ಬೈಸಿಕಲ್ ಚೈನುಗಳನ್ನು ಹಿಡಿದು ಬಂದು ಲಕ್ಷ್ಮಣನ ಮೇಲೆರಗಿ ಇರಿದು, ಹೊಡೆದರು. ಇದನ್ನು ತಿಳಿದ ಬನವಾಸಿ ಕಾಲೋನಿಯ ದಲಿತ ಯುವಕರು ಬಂದು ಲಕ್ಷ್ಮಣನನ್ನು ಬಿಡಿಸಿದಾಗ, ಸುತ್ತಮುತ್ತ ಇದ್ದ ಸವರ್ಣೀಯರು ಈ ಯುವಕರನ್ನೂ ಬಡಿಯಲು ಮುಂದಾದಾಗ ಗುಂಪು ಘರ್ಷಣೆಯೇ ನಡೆಯಿತು. ಆದರೆ ಈ ಗಲಾಟೆ ಕೆಲವು ದಲಿತರ ಹಾಗೂ ರೈತ ಸಂಘಟನೆಯ ಮುಖಂಡರ ಪ್ರವೇಶದಿಂದ ಎರಡು ಬಣದಲ್ಲೂ ರಾಜೀನಾಟಕವಾಗಿ ಮುಗಿಯಿತು. ಲಕ್ಷ್ಮಣನನ್ನು ಆಸ್ಪತ್ರೆಗೆ ಸೇರಿಸಲಾಯಿತು.

### ಸ್ವಾಭಿಮಾನ ಹತ್ತಿಕ್ಕಿದ "ಪ್ಲಾಂಟರ್ ಜಸೀಸ್"

ಮಾರ್ಚ್ 5 ರಂದು ಮಧ್ಯಾಹ್ನ ಒಂದು ಗಂಟೆಯ ಸಮಯದಲ್ಲಿ "ಪ್ಲಾಂಟರ್ ಜಸೀಸ್" ಮಹಿಳೆಯರು ಬಾಳುಪೇಟೆಯ ಬನವಾಸಿ ದಲಿತ ಕಾಲೋನಿಯ ಮಕ್ಕಳಿಗೆ ಯಾವುದೋ ಕೆಲವು ಮಾತ್ರೆಗಳ ಕೊಡಿಸಿ, ಕವರುಗಳಲ್ಲಿ ಹಾಕಿಟ್ಟುಕೊಂಡಿದ್ದ ಕಾಫಿತೋಟದ ಶ್ರೀಮಂತ ಮಾಲೀಕರ ಮಕ್ಕಳು ತೊಟ್ಟು ಬೀಸಾಡಿದ ಹಳೇದಾದ ಬಟ್ಟೆಗಳ ಹಂಚುತ್ತಿದ್ದರು. ಇದ ತಿಳಿದ ದ. ಸಂ. ಸ. ಕಾರ್ಯಕರ್ತರು "ಹಂಚೋದಾದ್ರೆ ಹೊಸವು ಹಂಚಿ, ಇವು ಬೇಡ" ಎಂದು ಪ್ರತಿಭಟಿಸಿ, ಹೆಸರಿನ ಆಸೆಗೆ ಮಾಡಲಾಗುತ್ತಿದ್ದ ಢೋಂಗೀ ಸಮಾಜಸುಧಾರಣೆ ನಾಟಕವನ್ನು ನಿಲ್ಲಿಸೋವಲ್ಲಿ ಯಶಸ್ವಿಯಾದರು. ಈ ಘಟನೆಯ ನಂತರದಲ್ಲಿ ಮಾರ್ಚ್ 7 ರಂದು ಬಂದ 'ಜನತಾ ಮಾಧ್ಯಮ' ಪತ್ರಿಕೆಯ ವರದಿಗೆ

ಕೊಡಲಾಗಿದ್ದ ಶೀರ್ಷಿಕೆ – "ಪ್ಲಾಂಟರ್ಸ್ ಜೆ. ಸಿ. ಮಹಿಳೆಯರ ಮಾನಗೆಟ್ಟ ನಡವಳಿಕೆ" ಎಂಬುದು ಇವತ್ತು ಬಹುಪಾಲು ಮಂದಿ ಹೇಳೋವಂತೆ ಒಳಗೇಕುದೀತಿದ್ದ ಸವರ್ಣೀಯರ ದ್ವೇಷಕ್ಕೊಂದು ಬಹಿರಂಗ ತಿರುವು ತಂದುಕೊಟ್ಟಿತು! ಬಾಳುಪೇಟೆ ಇಂದಿರಾನಗರ, ಜೆ. ಪಿ. ನ ರಗಳ ಕಾಫಿ ತೋಟದ ಮಾಲೀಕರು ಕುಮ್ಮಕ್ಕು ಕೊಟ್ಟು ಸವರ್ಣಿಯರೆಲ್ಲರನ್ನೂ ಒಗ್ಗೂಡಿಸಿ "ನಾಗರೀಕ ಹಿತರಕ್ಷಣ ಕ್ರಿಯಾ ಸಮಿತಿ" ಎಂಬುವ ಸಂಘಟನೆಯು ಮಾಡಿಕೊಂಡು ದಲಿತರ "ಸೊಕ್ಕು" ಮುರಿಯಲು ಟಾಂ ಟಾಂ ಮಾಡಿದರು.

**ತರಕಾರಿ ತರಲು ಹೋದ ಬಸವರಾಜ್ ಮೇಲೆ ಹಲ್ಲೆ**

ಬಾಳುಪೇಟೆಯ ಸಂತೆಯ ದಿವಸ ಮಾರ್ಚ್ 24 ರ ಸಂಜೆ ಏಳು ಗಂಟೆಯ ಸಮಯ. ಬಸವರಾಜ್ (ವ. 27) ಮತ್ತು ಸಂತಾನಹರಣ ಶಸ್ತ್ರ ಚಿಕಿತ್ಸೆಗೆ ಒಳಗಾಗಿ ಕೇವಲ ಎಂಟು ದಿವಸವಾಗಿದ್ದ ಆತನ ಹೆಂಡತಿ ಗೌರಮ್ಮ ತರಕಾರಿ ಕೊಳ್ಳಲು ಬಂದರು. ಸಂತೆಯೆಂದಮೇಲೆ ಸಣ್ಣಪುಟ್ಟ ಚಕಮುಕಿ, ಮಾತಿನ ಹೋರಾಟ ಕೊಡೋದರಲ್ಲಿ ಬಿಡೋದರಲ್ಲಿ ಇದ್ದೇ ಇರುತ್ತವೆ. ತರಕಾರಿಯವನು ತಕ್ಕಡಿಯಲ್ಲಿ ತೂಕ ಕಡಿಮೆ ಮಾಡುತ್ತಿರೋದರ ಬಗ್ಗೆ ಬಸವರಾಜ್ ಆಕ್ಷೇಪ-ತರಕಾರಿ ಮಾರುತ್ತಿದ್ದ ಸವರ್ಣೀಯ ವ್ಯಕ್ತಿ ಗಂಟಲು ಅರಿದು ಬರೋವಂಗೆ ಹಾರಾಟ ಮಾಡಿದ್ದು–ಯಾವುದೇ ಸಣ್ಣಪುಟ್ಟ ರಗಳೆ ಉಂಟಾದರೂ ದಲಿತರ ಸದೆಬಡೀಬೇಕೆಂದು ಹಲ್ಲು ಮಸೀತ ಕೂತಿದ್ದ ಬ್ರಾಂದಿ ಅಂಗಡಿ ಗೋಪಾಲ, ಈತನ ತಮ್ಮಂದಿರಾದ ಭಾಸ್ಕರ್, ರವಿ. ಕಾಡುಗದ್ದೆ ರಾಮಣ್ಣನ ಮಗ ವಿಶ್ವನಾಥ, ಮೊಗಪ್ಪ ಅಲಿಯಾಸ್ ಮಲ್ಲೇಶ್ ಮುಂತಾದವರು ಹಲ್ಲೆ ಮಾಡಲು ಅನುಕೂಲವಾಯಿತು. ಈ ಜನ ಬಂದವರೇ ಬಸವರಾಜ್‌ಗೆ ಚೈನಿಂದ ಹೊಡೆಯಲು ತೊಡಗಿದರು. ಅಡ್ಡಿ ಬಂದ ಗೌರಮ್ಮನಿಗೂ ಒಳ್ಳೆ ಸೇವೆಯಾಯಿತು. ಎರಗಲೇ ಕೂತಿದ್ದ ಈ ಮೇಲಿನ ಜನರೊಂದಿಗೆ ಅಕ್ಕಪಕ್ಕದ ಅಂಗಡಿ, ಹೋಟೆಲ್ ಮಾಲೀಕರೂ ಸೇರಿಕೊಂಡು, ಹಲ್ಲೆಕೋರರ ಗುಂಪು ಬಲವಾಯಿತು. ಸರಿಯೇ ದಲಿತರಾರಿದ್ದಾರೆ ಎಂದು ಹುಡುಕಾಟ ದೊರೆತ ವೈಸ್ ಛೇರ್‌ಮನ್ ಬಿ. ಈರಪ್ಪ (ಈ ಗಲಾಟೆಯಾದ ಮೇಲೆ ರಾಜೀನಾಮೆ ಕೊಟ್ಟಿದ್ದಾರೆ), ಗಿರಿಜೇಂದ್ರ, ಚಂದ್ರಶೇಖರ, ಗುಂಡ, ನಿರ್ವಾಣಯ್ಯ ಹಾಗೂ ಈತನ ಹೆಂಡತಿ ಗೌರಮ್ಮ, ಬಿ. ಜಿ. ಗುಂಡಪ್ಪ, ಬಿ. ಇ. ಸಿದ್ದಯ್ಯ, ಬಿ. ಆರ್. ಪಾಪಣ್ಣ ಮುಂತಾದವರ ಮೇಲೆ ಹಲ್ಲೆ ಮಾಡಿ ಹೋಗಿ ಬರೋ ಬಸ್ಸುಗಳಲ್ಲಿ ಗುರ್ತಿರುವ "ಹೊಲೆಯರಿಗಾಗಿ" ಹುಡುಕಾಟ ನಡೆಸುತ್ತಿದ್ದರು. ಯಾರೂ ಸಿಗದಿದ್ದಾಗ ಮುನ್ನೂರು ಜನ ಹಲ್ಲೆಕೋರರು ಬನವಾಸಿಯ ದಲಿತರ ಕಾಲೋನಿ ಕಡೆ ನುಗ್ಗಿದರು. ಮುಂದಿನದನ್ನು ಅಲ್ಲಿಯ ಜನರ ಮಾತಲ್ಲೇ ಹೇಳಬಹುದಾದರೆ–"ಯಾವ ರೀತೀಲೂ ತಯಾರಾಗ್ದೇದ್ದ ನಮ್ಮೇಲೆ ಮುನ್ನೂರು ಜನ ಚಾಕು ಚೂರಿ ಚೈನು ಕತ್ತಿಗಳ ಹಿಡ್ದು ಮೇಲ್ ಬೀಳಾಕೆ ಬಂದಿದ್ದವರ್ನೇನಾದ್ರೂ ರೈತ ಸಂಘದ ಅಧ್ಯಕ್ಷ ಎಚ್. ಎಂ. ವಿಶ್ವನಾಥ್, ಕೆ. ಟಿ. ಶಿವಪ್ರಸಾದ್ ತಡೀದಿದ್ರೆ ಬೀದೀಲ್ ನಮ್ ಯಣ್ಗಳ್ಳ ಬೀಳ್ತಿದ್ದೋ".

**ಸ್ವಾಭಿಮಾನವ ಹತ್ತಿಕ್ಕಲು ಕ್ರಮ**

ಈ ಘಟನೆಯಾದ ನಂತರದಲ್ಲಿ ಬಸ್ಸಲ್ಲಿ, ಅಂಗಡಿ ಮುಂಗಟ್ಟುಗಳಲ್ಲಿ, ಬೀದಿ ಬೀದಿಗಳಲ್ಲಿ ದಲಿತರನ್ನು ಅವಾಚ್ಯ ಶಬ್ದಗಳಿಂದ ಬಯ್ಯುವ; ಸಾಮಾನು ಕೊಳ್ಳಲು ಹೋದ ಗುಂಡಪ್ಪನ ಮಗ ಸೋಮನನ್ನು ಥಳಿಸಿದ, 'ಜನತಾ ಮಾಧ್ಯಮ' ಪತ್ರಿಕೆ ತರಲು ಹೋಗಿದ್ದ ಉಮೇಶ್ ಎಂಬ ಹುಡುಗನ ಮೇಲೆ ಸೈಕಲ್ ಚೈನಿನಿಂದ ಹಲ್ಲೆ ಮಾಡಿದ; ಬಿ. ಆರ್. ರವೀಪ್ರಕಾಶ್ ಮತ್ತು ಧರ್ಮಪ್ಪ ಎಂಬ ದಲಿತ ಹುಡುಗರು ಅಂಚೆ ಕಚೇರಿಯಲ್ಲಿನ ಕೆಲಸ ಮಾಡುತ್ತಿದ್ದು–ತಮ್ಮ ಕೆಲಸ ಮಾಡಲೋದಾಗ ಪೋಲೀಸರ ರಕ್ಷಣೆ ಇದ್ದರೂ ಕ್ರೂರವಾಗಿ ಹೊಡೆದಂತ ಹಲವಾರು ಪ್ರಕರಣಗಳು ಕ್ರಮವಾಗಿ ಏಪ್ರಿಲ್ 1 . 21, 22 ರಂದು ನಡಿದಿವೆ. ಈ ಹಿನ್ನೆಲೆಯಲ್ಲಿ ಕಾಫಿ ತೋಟದ ಮಾಲೀಕರುಗಳಾದ ಬಿ. ಬಿ. ಪಾಲಾಕ್ಷ, ಬಿ. ಎಸ್. ಮಲ್ಲಿಕಾರ್ಜುನ, ಬಿ. ಡಿ. ವಿಶ್ವನಾಥ, ಬಿ. ಡಿ. ಬಸವರಾಜ್, ಬಿ. ಎಂ. ಮಹಾರುದ್ರಪ್ಪ, ಕವಿತಹೋಟೆಲ್ ಮಾಲೀಕ ಚನ್ನಬಸಪ್ಪ, ಬ್ರಾಂದಿ ಅಂಗಡಿ ಗೋಪಾಲ ಕಾಡುಗದ್ದೆ ರಾಮಣ್ಣನ ಮಗ ವಿಶ್ವನಾಥ್....ಮುಂತಾದವರು ಹಣ ಚೆಲ್ಲಿ ದಲಿತರ ಸ್ವಾಭಿಮಾನವನ್ನು ಹತ್ತಿಕ್ಕಲು ಸತತ ಪ್ರಯತ್ನ ಮಾಡುತ್ತಿರುವರು. ಸಾಧ್ಯವಾದ ಕಡೆಗಳಲ್ಲೆಲ್ಲಾ ಪ್ರಯತ್ನಿಸಿರೋ ಈ ಮಂದಿಯ ಹೆಸರು-107 ರ ನಂಬರಿನ ಪ್ರಕಾರವಾಗಿಯೂ ಅಲ್ಲದ ಬಿ. ಬಿ. ಸಿದ್ದಯ್ಯನವರನ್ನು ಕೊಲೆ ಮಾಡಲು ಪ್ರಯತ್ನಿಸಿದ ಸಲುವಾಗಿ 307 ನಂಬರಿನ ಪ್ರಕಾರವಾಗಿಯೂ ಕೇಸ್‌ಗಳಲ್ಲಿ ದಾಖಲಾಗಿದ್ದರೂ ಪೋಲೀಸರು ಅರೆಸ್ಟ್ ಮಾಡಿಲ್ಲ. ಕೇಳಿದರೆ ಹುಡುಕುವ ಪ್ರಯತ್ನವನ್ನು ಮಾಡುತ್ತಿರುವುದಾಗಿ ಹೇಳುವ ಪೋಲೀಸರ ಎದುರೇ ರಾಜಾರೋಷವಾಗಿ ಹಾಸನದಲ್ಲಿ ಓಡಾಡಿಕೊಂಡಿರುವ ಈ ಮಂದಿ ದಲಿತ ಮುಖಂಡರನ್ನು ಹಾಗೂ ಇವರಿಗೆ ಸಹಾನುಭೂತಿ ತೋರಿಸುವವರನ್ನು 'ಇಲ್ಲದಾಗಿ' ಮಾಡಲು ಕ್ರೂರ ಜಾಲಗಳನ್ನು ನಿರ್ಮಿಸಿದ್ದಾರೆ. ಈ ಜಾಲಕ್ಕೆ ಸಿಕ್ಕಿಕೊಂಡ ಮೊದಲ ವ್ಯಕ್ತಿ ಸಿದ್ದಯ್ಯನವರು.

# ಪ್ಲಾಂಟರುಗಳ ಹಲ್ಲೆಗೊಳಗಾದ ಪೋಲೀಸ್ ಅಧಿಕಾರಿ

ಗುಂಡಪ್ಪನ ಮಗ ಸೋಮಪ್ಪ ಎಂಬುವ ಹುಡುಗ ಸವರ್ಣೀಯ ಅಂಗಡಿಗೆ ಹೋದಾಗ–ಆತನನ್ನು ಮೊಗಪ್ಪ ಅಲಿಯಾಸ್ ಮಲ್ಲೇಶ್, ಡ್ರೈವರ್‌ನಾಗು. ದೊರೆಸ್ವಾಮಿ ಎಂಬ ರೈತ ನಾಯಕರ ಮಗ ಗುರು, ಕಾಡುಗದ್ದೆ ರಾಮಣ್ಣನ ಮಗ ವಿಶ್ವನಾಥ್ ಥಳಿಸಿದರು. ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಹೇಳಿಕೆ ಕೊಡಲು 21ರಂದು ಪೋಲೀಸ್ ಜೀಪೊಂದು ಬಂದು ಸೋಮಪ್ಪನನ್ನು ಕರೆದೋಯಿತು. ಅಗ ಸರ್ಕಲ್ ಇನ್ಸ್‌ಪೆಕ್ಟರ್ ಆಗಿದ್ದ ಸೂರ್ಯನಾರಾಯಣಸ್ವಾಮಿ ಎಂಬುವರು ಎರಡೂ ಕಡೆಯ ವಿಚಾರಣೆಯಾದ ಮೇಲೆ ವಿಶ್ವನಾಥರ ಮಗ ಗುರುವನ್ನು ಸಹಿಹಾಕಲು ಹೇಳಿದರು. ಅಷ್ಟರಲ್ಲಿ ಈ ಎಲ್ಲಾ ಪ್ರಕರಣಗಳಲ್ಲಿಯೂ ಕಾಲುಕೆರೆದೇ ಜಗಳ ಮಾಡಿಕೊಂಡು ಬಂದಿರೋ ಹಲವಾರು ಕುಖ್ಯಾತರು ಒಳಗೆ ಬಂದು ಸರ್ಕಲ್ ಇನ್ಸ್‌ಪೆಕ್ಟರನ್ನು ಚೆನ್ನಾಗಿ ಬೈದು ಹೊಡೆದು ಗುರುವನ್ನು ಎಳೆದುಕೊಂಡು ಹೋಗಿದ್ದಾರೆ. ಈ ಸಲಿಗೆ ಸವರ್ಣೀಯರಿಗೆ ಯಾರು ಕೊಟ್ಟರು? ಸೂರ್ಯನಾರಾಯಣಸ್ವಾಮಿ ಹಲವು ಸಹಸ್ರ ರೂಪಾಯಿಗಳನ್ನು ಮೇಲು ಜಾತಿಯ ಶ್ರೀಮಂತರಿಂದ ಕಸಿದು ಬಾಳುವಿನ ದಲಿತರನ್ನು ಬಗ್ಗುಬಡಿವೆನೆಂದು ಮಾತುಕೊಟ್ಟಿದ್ದರೆಂತಲೂ, ತುಂಬಾ ಅಹಿಂಸಾತ್ಮಕವಾಗಿ ಶಾಂತಿಯುತವಾಗಿ ತಮ್ಮ ಹೋರಾಟವನ್ನು ಮುಂದುವರಿಸಿದ ದಲಿತರನ್ನು ಏನು ಮಾಡಲಾಗದಿದ್ದ ಈ ಸರ್ಕಲ್ ಇನ್ಸ್‌ಪೆಕ್ಟರನ್ನು ರಾಜಾರೋಷವಾಗಿಯೇ ಇಲ್ಲಿನ ಧನಿಕರು ಹೊಡೆದರೆಂದೂ ಇದರಿಂದ ಅವಮಾನರಾದ ಈ ಅಧಿಕಾರಿ ತಾವೇ ಮುಂದುವರಿದು ವರ್ಗಾಮಾಡಿಸಿಕೊಂಡರೆಂತಲೂ ಸುದ್ದಿ. ಲಂಚವೇ ತಮ್ಮ ವ್ಯಕ್ತಿತ್ವಕ್ಕೆ ಮಸಿ ಬಳಿದ ಈ ಅಧಿಕಾರಿಯ ಈ ಘಟನೆಯಿಂದ ಇತರರು ಬುದ್ಧಿ ಕಲಿಯುವಂತಾದರೆ?

**ದ. ಸಂ. ಸ. ಜಾತಾ ಕಾರ್ಯಕ್ರಮ**

ಫೆಬ್ರುವರಿಯಿಂದ ಏಪ್ರಿಲ್ 82ರವರೆಗೆ ದಲಿತರ ಮೇಲೆ ನಡೆದ ಸತತವಾದ ಹಲ್ಲೆಗಳು. ಈ ಹಲ್ಲೆ ಮಾಡಿದವರ ಮೇಲೆ ಯಾವುದೇ ರೀತಿಯ ಕ್ರಮ ಕೈಗೊಳ್ಳದೇ ಹೋದುದು, ನಡೆದ ಘಟನೆಗಳಿಂದಾಗಿ ಕಾಫಿತೋಟದ ಒಡೆಯಂದಿರುಗಳು ದಲಿತರನ್ನು ಕೂಲಿಗೆ ಕರೆಯದೆ ಬಹಿಷ್ಕಾರ ಹಾಕಿ

(ಮುಂದಿನ ಪುಟಕ್ಕೆ)

# ಹಲ್ಲೆಕೋರರಿಗೆ ನುಂಗಲಾರದ ತುತ್ತು: ದಲಿತರ ತ್ಯಾಗಿ

ರುವ ವಿಚಾರವನ್ನು ಸರ್ಕಾರದ ಅಧಿಕಾರಿಗಳ ಗಮನಕ್ಕೆ ತಂದರೂ ಯಾವುದೇ ಪರಿಣಾಮಕಾರಿಯಾದ ನಿಲುವನ್ನು ತೆಗೆದುಕೊಳ್ಳದ ಒಟ್ಟಾರೆ ಆಡಳಿತ ವ್ಯವಸ್ಥೆಯನ್ನು ಖಂಡಿಸಲು ದ. ಸಂ. ಸ. ಮೇ 3ರಂದು ಜಾತಾ ಕಾರ್ಯಕ್ರಮ ಏರ್ಪಡಿಸಿತ್ತು. 200 ಜನ ಮಹಿಳೆಯರೂ ಸೇರಿದಂತೆ ಒಂದು ಸಾವಿರ ಜನ ಬಾಳ್ಳುಪೇಟೆಯಿಂದ ಹಾಸನಕ್ಕೆ ಬಂದು ಸಾರ್ವಜನಿಕ ಸಭೆ ಏರ್ಪಡಿಸಲಾಗಿತ್ತು. ಈ ಸಂದರ್ಭದಲ್ಲಿ ಸರ್ಕಾರಕ್ಕೆ ಆರು ಒತ್ತಾಯಗಳನ್ನು ಮಂಡಿಸಲಾಗಿತ್ತು. ಈಗ ಅವುಗಳಲ್ಲಿ ಕೆಲವನ್ನೂ ಸರ್ಕಾರ ಈಡೇರಿಸಲು ಕ್ರಮ ತೆಗೆದುಕೊಂಡಿದೆ. ಬಾಳ್ಳುಪೇಟೆಯ ಒಟ್ಟಾರೆ ಘಟನೆಯ ಬಗ್ಗೆ ಸಿ. ಓ. ಡಿ. ತನಿಖೆಯಾಗಬೇಕೆಂದು ಒತ್ತಾಯಿಸಲಗಿತ್ತು. ಸಿದ್ಧಯ್ಯನವರ ಕೊಲೆ ಪ್ರಯತ್ನ ನಡೆದ ಬಳಿಕ ಈ ತನಿಖೆ ಆರಂಭವಾಗಿದೆ. ದಲಿತರಿಗೆ ಕಾಯಂ ದಿನಗೂಲಿ ಸಿಗಬೇಕು ಎಂದು ದ. ಸಂ. ಸ, ಒತ್ತಾಯ ಮಾಡಿದುದನ್ನು ಪರಿಗಣಿಸಿ ತತ್ಕಾಲೀಕ ದಿನಗೂಲಿ ವ್ಯವಸ್ಥೆ ಮಾಡಲಾಗಿದೆ. ಬಾಕಿ ಒತ್ತಾಯಗಳಾದ ಬಾಳ್ಳು ಪೇಟೆ ಘಟನೆಗೆ ಸಂಬಂಧಿಸಿದ ಪ್ರಚೋದಕರು, ಹಲ್ಲೆಕೋರರ ಮೇಲೆ ಸೂಕ್ತಕ್ರಮ ಕೈಗೊಳ್ಳುವುದು ; ನೊಂದ ದಲಿತರಿಗೆ ಸರ್ಕಾರ ಕೂಡಲೇ ಪರಿಹಾರ ನೀಡುವುದು ; ಬಾಳ್ಳುಪೇಟೆಯ ಸುತ್ತ ಮು ತ್ತ ಇರುವ ವ್ಯವಸಾಯಕ್ಕೆ ಯೋಗ್ಯವಾದ ಸರ್ಕಾರದ ಭೂಮಿಯನ್ನು ಕೂಡಲೇ ಭೂಹೀನ ದಲಿತರಿಗೆ ಮಂ ಜೂ ರು ಮಾಡುವ ವ್ಯವಸ್ಥೆ ಮಾಡಬೇಕೆಂಬುದು ; ಕುಶಲ ಕೈಗಾರಿಕೆ ಜಾನುವಾರು ಸಾಗಾಣಿಕೆ, ಮುಂತಾದ ಬಾಬ್ತುಗಳಿಗಾಗಿ ಕೂಡಲೇ ಸಾಲ ಮಂಜೂರು ಮಾಡುವಂಥಾ ಇವೇ ಮೊದಲಾದ ಬೇಡಿಕೆಗಳು ಸರ್ಕಾರದಿಂದ ಈ ಕ್ಷಣ ಈಡೇರಬೇಕಾಗಿದೆ.

**ಸಸ್ಪೆಂಡ್ ಆಗಬೇಕಾದ ಶಿವಣ್ಣ ಎಂಬ ದಫೇದಾರ**

ಎಪ್ರಿಲ್ 21ರಂದು 107ನೇ ನಂಬರಿನ ಆಧಾರದ ಮೇಲೆ ಬಾಳ್ಳುಪೇಟೆಯ ನೋವ್ಪತಿಂದ ಹಲವರನ್ನು ಬಂಧಿಸಿ ಆಸ್ಪತ್ರೆಗೆ ಸೇರಿಸದೆ ರೂ ರ ಲ್ ಪೋಲೀಸ್ ಸ್ಟೇಷನ್‌ನಲ್ಲಿ ಇಡಲಾಯಿತು. ಈ ಸಂದರ್ಭದಲ್ಲಿ ಇಲ್ಲಿನ ದಫೇದಾರ ಶಿವಣ್ಣ ಎಂಬ ಮೂರ್ಖ ಜಾತೀವಾದಿ ದಫೇದಾರ ತಮ್ಮ ಜಾತಿಯವರೇ ಆದ ಪ್ಲಾಂಟರುಗಳಿಂದ ಹಣದ ಎಂಜಲಿಗೆ ಆಸೆ ಬಿದ್ದು ರಾಜಿಸೂತ್ರವ ಗಾಯಾಳುಗಳಾದ ಬಂಧಿತ ದಲಿತರ ಮುಂದಿಟ್ಟು – "ಹೊಲೇರ್ ಗ್ಯಾಕ್ಲಾಬೇಕೂ ಹೊಡ್ದಾಟ, ನೀವ್ ಅವ್ರ ಮುಂದ ಹೊಡ್ದಾಟ ಮಾಡಕಾದಾತ. ಹೋಗಿ ರಾಜಿ ಮಾಡ್ಕಳದ ಬಿಟ್ಟು ಇಂಗೇ ಇದ್ರೆ ಕತ್ರಿಸಿ ಹಾಕ್ತಾರೆ........" ಎಂದು ತನ್ನ ಜಾತೀ ಪರವಾಗಿ ಆಟ್ಟೋಪ ಪ್ರದರ್ಶಿಸಿದ್ದಾನೆ. ಇಂಥಾ ಮುಟ್ಠಾಳರು ಇಡೀ ಪೋಲೀಸ್ ವ್ಯವಸ್ಥೆಯನ್ನು ಅ ಡ್ಡ ದಾ ರಿ ಹಿಡಿಸೋಂಥ ನೀಚ ಕೆಲಸವನ್ನು ಮಾಡುತ್ತಿದ್ದಾರೆ. ಇಂಥವರನ್ನು ತತ್‌ಕ್ಷಣ ಸಸ್ಪೆಂಡ್ ಮಾಡಿ ಪಾಠ ಕಲಿಸಬೇಕಾದುದು ಪೋಲೀಸ್ ಸೂ ಪ ರಿಂ ಟೆಂ ಡೆಂಟ್‌ಬೋರ್ಕರ್ ಅವರ ಕೆಲಸ.

**ಚಂದ್ರಪ್ರಸಾದ್ ತ್ಯಾಗಿಯಮೇಲೆ ಆರೋಪ!**

ಹಾಸನ ಜಿಲ್ಲೆಯಲ್ಲಿ ದ. ಸಂ. ಸ. ಅವಿಭಾಜ್ಯ ಅಂಗವೇ ಆಗಿಹೋಗಿರುವ ಜಿಲ್ಲಾ ಸಂಚಾಲಕತ್ಯಾಗಿ. ಹಲವು ವರ್ಷಗಳಿಂದ. ಈ ಜಿಲ್ಲೆಯ ಅನ್ಯಾಯಗಳಿಗೆ ಸವಾಲಾಗಿರುವ ವ್ಯಕ್ತಿ. ಇಂದು ಬಾಳ್ಳುಪೇಟೆಯ ಗಲಾಟೆಯ ಸಂದರ್ಭದಲ್ಲಿ ಮೇಲು ಜಾತಿಯ ಶ್ರೀಮಂತರ ಉರಿಕಣ್ಣುಗಳ ಆಕ್ರೋಶಕ್ಕೆ ತುತ್ತಾದ ಕೇಂದ್ರವ್ಯಕ್ತಿ. ಹೇಗಾದರೂ ಮಾಡಿ ಈತನನ್ನು ಸದೆ ಬಡಿಯಬೇಕೆಂದು ತೀರ್ಮಾನಿಸಿದ ಈ ಜನ "ತ್ಯಾಗಿ ರಾ ಜಿ ಮಾ ಡಿ ಕೊ ಳ್ಳ ಲು 25.000 ರೂಪಾಯಿ ಕೇಳ್ತಿದ್ದಾರೆ" ಎಂದು ವದಂತಿ ಹಬ್ಬಿಸುತ್ತಿದ್ದಾರೆ. ಹೀಗೆ ವದಂತಿಯಿಂದ ಬಾಳ್ಳುಪೇಟೆಯ ದಲಿತರು ತ್ಯಾಗಿಯಿಂದ ದೂರವಾದರೆ ಮತ್ತೆ ಇವರನ್ನು ಹೇಗೆ ಸದೆ ಬ ಡಿ ಯ ಬೇ ಕೆಂ ಬು ದು ಪ್ಲಾಂಟರುಗಳಿಗೆ ಗೊತ್ತಿರುವುದರಿಂದ ಈ ವದಂತಿ ಚಲಾವಣೆ ಮಾಡಲು ನೋಡಿದ್ದಾರೆ. ಆದರೆ ಇದು ಅಷ್ಟು ಸುಲಭವಲ್ಲ ಎಂದು ತಿ ಳಿ ದಾ ಗ ಚಂ ದ್ರ ಪ್ರಸಾದ್‌ತ್ಯಾಗಿ ಹಾಗೂ ಸಕಲೇಶಪುರದ ತಾಲ್ಲೂಕು ದ. ಸಂ. ಸ. ಸಂಚಾಲಕ ಧರಣೀಶರನ್ನು ಮುಗಿಸಿ ಬಿಡಲು ಹೊಂಚು ಹಾಕಲಾಗುತ್ತಿದೆ. ಇದ ತಿಳಿದ ಪೋಲೀಸ್ ಅಧಿಕಾರಿಗಳು ತ್ಯಾ ಗಿ ಯ ವ ರಿ ಗೆ ಪೋಲೀಸ ರಕ್ಷಣೆ ಕೊಟ್ಟಿದ್ದಾರೆ.

**ಜಿಗುಪ್ಸೆಗೊಂಡ ಕೆ. ಟಿ. ಶಿವಪ್ರಸಾದ್**

ಹಾಸನದ ರೈತಸಂಘದ ನಾಯಕ ಕೆ. ಟಿ. ಶಿವಪ್ರಸಾದ್ ಎಲ್ಲಾ ಸಂದರ್ಭದಲ್ಲೂ ದಲಿತರಪರವಾಗಿದ್ದು ದಲಿತರು ತಾಳ್ಮೆಯಿಂದ ಮತ್ತೂ ಶಾಂತಿಯಿಂದ ತಮ್ಮ ಹೋರಾಟವನ್ನು ಮುಂದುಪರಿಸಿಕೊಂಡೋಗಲು ಉತ್ಸಾಹ ತುಂಬಿದ್ದಾರೆ. ತುಂಬ ಅಪರೂಪದ ಕಲೆಗಾರರೂ ಆದ ಇವರ ಮೇಲೆ 16 ಹಿಂದಿನ ಮೊಕದ್ದಮೆಗಳು ಇದ್ದು, ಈ ಗ ಲಾ ಟೆ ಯ ಲ್ಲಿ ದಲಿತರ ಪರವಾಗಿ ಈತ ಕೆಲಸ ಮಾ ಡು ತ್ತಿ ರುವುದನ್ನು ತಿಳಿದ ಪ್ಲಾಂಟರುಗಳು ಪೋಲೀಸ್ ಅಧಿಕಾರಿಗಳು ಮೂಲತಃ ಮತ್ತೆ ಮತ್ತೆ ಅರೆಸ್ಟ್ ಮಾಡಿಸಿ ಹಿಂಸೆ ಕೊಡುತ್ತಿದ್ದಾರೆ ; ಬಾಡಿಗೆ ಮನೆಯನ್ನು ಬಿಡಿಸಲು ಮನೆಯ ಮಾಲೀಕರಿಗೆ ಒತ್ತಾಯ ತರುತ್ತಿದ್ದಾರೆ. ಹಾಗೇನಾದರೂ ಆದರೆ ಬನವಾಸಿಯಲ್ಲೇ ಸ್ವಂತ ಮನೆ ಕಟ್ಟಿ ಕೊಡಲು ಇಲ್ಲಿನ ದಲಿತ ಯುವಕರು ಯೋಚಿಸುತ್ತಿದ್ದಾರೆ.

---

# ಕೆಳಜಾತಿಗಳ ಕೊಳಕು ಮುಖ!

ಈ ಮಾತಿನ ಹಿನ್ನೆಲೆಯಲ್ಲಿ ಭಗ್ನ ಪ್ರೇಮಿಗಳ ಕಥೆಯುಂಟು. ತುಮಕೂರು ಜಿಲ್ಲೆಯಲ್ಲೇ ಕೆ. ಇ. ಬಿ. ಕಛೇರಿಯ ನೌಕರನೊಬ್ಬ ನನ್ನ ಆಪ್ತ ಗೆಳೆಯ. ಸಭ್ಯಸ್ಥ ಹಾಗೂ ದಲಿತ ಕ್ರಾಂತಿಕಾರಿ ಯುವಕ. ಈತ ತನ್ನ ಕಾಲೇಜು ಗೆಳೆಯನೊಬ್ಬನ ತಂಗಿಯನ್ನು ಪ್ರೀತಿಸಿದ. ಆಕೆ ತುಮಕೂರು ಸರ್ಕಾರಿ ಜೂನಿಯರ್ ಕಾಲೇಜ್ ವಿದ್ಯಾರ್ಥಿನಿ. ವಿಚಾರವಂತಳು. ಪ್ರೀತಿ ಪ್ರೇಮಗಳ ಅಮಲಿನಲ್ಲಿ ಈರ್ವರೂ ಮೈಮರೆತ ದಿನಗಳೂ ಉಂಟು. ಪ್ರಣಯದ ಆಕ್ರೋಶದಲ್ಲಿ ತನ್ನ ಗುರುತಿಗಾಗಿ ಅವಳು ತನ್ನ ಪ್ರಿಯತಮನ ಎದೆಯ ಎಡ ಭಾಗದಲ್ಲಿ ಕಚ್ಚಿದ್ದ ಬಾಚಿಹಲ್ಲುಗಳ ಗುರುತು ಇಂದಿಗೂ ಇದೆ.

ವಿಷಯ ಹುಡುಗಿಯ ಮಾವನಿಗೂ ತಿಳಿಯಿತು. ಈತ ರಸ್ತೆ ಸಾರಿಗೆ ಇಲಾಖೆಯ ನೌಕರ ಮತ್ತು ಎಲ್. ಎಲ್. ಬಿ. ಅಪೂರ್ಣ ಪದವೀಧರ ಹಾಗೂ ಹಿಂದುಳಿದ ಜಾತಿಯಲ್ಲೇ ಮೇಲ್ಪಟ್ಟದ ಕುಲದವನೆಂಬ ಹಮ್ಮಿನ ಮೂರ್ಖ. ಪ್ರೇಮಿಗಳಿಬ್ಬರೂ ಮಾದಿಗ ಜನಾಂಗಕ್ಕೆ ಸೇರಿದವರಾಗಿದ್ದರೂ. ಹುಡುಗ ಕೀಳು ಜಾತಿಯವನೆಂದು, ಅವರ ಮದುವೆಗೆ ಕಂಟಕನಾದ. ಹುಡುಗಿ ಹಳ್ಳಿಯಲ್ಲಿ ನಾಲ್ಕು ಗೋಡೆಗಳ ಕತ್ತಲೆಯಲ್ಲಿ ಕೊಳೆಯುವಂತೆ ಮಾಡಿದ ಆದರೆ ಪ್ರೇಮಿಗಳ ಹೃದಯಗಳು ಓರ್ವರೋರ್ವರಿಗಾಗಿ ಇಂದಿಗೂ ಮಿಡಿಯುತ್ತಿವೆ.

ಇದೆಲ್ಲಾ ತಿಳಿದ ನಾನು ಹುಡುಗಿಯ ಮಾವನನ್ನು ಒಮ್ಮೆ ಭೇಟಿಯಾಗಿ "ಏನ್ ಸಾರ್, ನಮ್ ಜಾತಿನಲ್ಲೇ ಮೇಲ್ ಜಾತಿ, ಕೀಳ್‌ಜಾತಿ ಅಂತಾರಲ್ಲಾ ಇದರ ಬಗ್ಗೆ ನೀವ್ ಏನ್ ಹೇಳ್ತೀರಾ ? ಎಂದೆ. ಅದಕ್ಕೆ ಅವರು 'ನೋಡಿ ಚಾಡಮಾಲಿಗಳು ಕೀಳು ಜಾತಿ, ಅವರ ಮನೆಯಲ್ಲಿ ಮದುವೆಯಾಗಬಾರ್ದು" ಎಂದರು.

ಎಲ್ಲರಿಂದ ನಿಕೃಷ್ಟರಾಗಿ ಕಾಣಲ್ಪಡುವ ಜನರೂ ತಮ್ಮ ಕಾಲಕೆಳಗೆ ನಿಕೃಷ್ಟರನ್ನು ಉಡುಕುತ್ತಾರಾ ; ಜಾತಿ ವ್ಯವಸ್ಥೆ ಎಷ್ಟು ಆಳವಾಗಿ ಬೇರುಬಿಟ್ಟಿದೆ ! ಎಂದು ಕಂಗಾಲಾದೆ.

'ಅಭಿಮಾನಿ'

ತುಮಕೂರು

# ನನ್ನ ನೋವಿನ ಸಂಪುಟದಿಂದ... ೨

**ಲೇಖನಿಯ ಮೂಲಕ ನಾವು ಭ್ರಮೆಗಳನ್ನು ಹಬ್ಬಿಸುತ್ತಿದ್ದೇವೇನೋ.... ಇಲ್ಲಿ ಅತ್ಯಂತ ವಿಚಿತ್ರವಾದ ಸಂಕಷ್ಟವೆಂದರೆ ನನ್ನಲ್ಲಿನ ಬಹಳಷ್ಟು ರಾಜಕೀಯ ಮಂದಿ ಅಧಿಕಾರ ಲೋಭಿಗಳಾಗಿರುವಾಗ ಹಾಗೂ ಬುದ್ಧಿಜೀವಿಗಳು ಸುಳ್ಳರು ಮತ್ತು ಸಮಯಸಾಧಕರಾಗಿರುವಾಗ ಶ್ರೀಸಾಮಾನ್ಯನ ಹೋರಾಟಕ್ಕೆ ಶಕ್ತಿ ಬರುವುದಾದರೂ ಎಲ್ಲಿಂದ ?— ಎಂದು ಪ್ರಶ್ನಿಸುವ ಬಿಹಾರದ ಪ್ರಮುಖ ಲೇಖಕರಾದ ಮಧುಕರಸಿಂಹ ಭಾರತೀಯ ಸೃಜನಾತ್ಮಕ ಲೇಖಕನ ಒಳತೋಟಿಗಳನ್ನೆಲ್ಲ ತಮ್ಮ ಅನುಭವಗಳ ಮೂಲಕ ಇಲ್ಲಿ ಬಿಚ್ಚಿ ಇಟ್ಟಿದ್ದಾರೆ. —ಸಂಪಾದಕ**

ನನ್ನಲ್ಲಿರುವ ಲೇಖಕ ಎಷ್ಟು ಪ್ರಾಮಾಣಿಕನೂ, ನಿಷ್ಠನೂ ಹಾಗೂ ಸಂಘರ್ಷೋನ್ಮುಖನೂ ಆಗಿದ್ದಾನೋ ಅಷ್ಟೇ ಪ್ರಮಾಣದಲ್ಲಿ ನಾನು ಈವರೆಗೆ ಕಳೆದಿರುವ ಬಾಳಿನ ಬಹಳಷ್ಟು ದಿನಗಳು ನೋವು ಹಾಗೂ ಕತ್ತಿಯ ಅಲುಗಿನ ಮೇಲೆ ನಡೆದು ಬಂದಂತವುಗಳಾಗಿವೆ. ನನ್ನ ಪೋಲಿಸ್ ತಂದೆ ನನ್ನನ್ನು ನನ್ನ 12–13ನೇ ವಯಸ್ಸಿನಲ್ಲಿಯೇ ಪೋಲಿಸ್ ಮಾಡ ಬಯಸುತ್ತಿದ್ದರಾದರೂ ಅವರ ಆಸೆ ಅವರ ಸಾವಿನ ಜೊತೆಯಲ್ಲಿಯೇ ಸತ್ತು ಹೋಯಿತು ಕೂಡ. ಆದರೆ ನಾನು ಅವರಂತೆ ಪೋಲಿಸ್ ಪೇದೆಯಾಗಲಿಲ್ಲ. ಬದಲಾಗಿ ಬಿ. ಎ. ಪಾಸ್ ಮಾಡಿ ಗುಮಾಸ್ತನಾಗುವ ಕನಸು ಕಾಣತೊಡಗಿದೆ. ಬದುಕು ಮತ್ತು ನೌಕರಿಗಾಗಿ ನನ್ನ ಇಪ್ಪತ್ತೈದು ವರ್ಷಗಳ ಆಯುಸ್ಸನ್ನು ಸವೆಸಿದೆ. ಅರ್ಜಿಗಳನ್ನು ಬರೆದು–ಬರೆದು ಎಸೆಯುವುದರಲ್ಲೇ ನಾನು ದಿನ ದಿನಕ್ಕೂ ಸವೆಯುತ್ತಿದ್ದೂ, ತಂದೆಯ ಕೋಪಮತ್ತು ಬೈಗುಳಗಳನ್ನು ಸಹಿಸಿಕೊಳ್ಳುತ್ತಿದ್ದೆ. ತಂದೆ ಮಾತು ಜನಗಳ ಮುಂದೆ 'ಇವ ಪೋಲಿಸ್ ಆಗಿದ್ದಿದ್ದರೆ ಇಷ್ಟು ಕಷ್ಟ ಪಡುತ್ತಿರಲಿಲ್ಲ. ಮನೆಯಲ್ಲಿ ಇಬ್ಬರು ದುಡಿಯುವವರು ಇರುತ್ತಿದ್ದರು ಎಂದು ಹೇಳುತ್ತಿದ್ದರು. ಅವರ ದೃಷ್ಟಿಯಲ್ಲಿ ನಾನು ಓದಿ–ಬರೆದು ಅವರನ್ನು ದಿವಾಳಿ ಮಾಡಿದ್ದೇನೆ. ಹೇಡಿಯಂತೆ ನಾನು ಹುಟ್ಟಿಸಿರುವ ಇಬ್ಬರು ಮಕ್ಕಳಿಗೆ ಯಾರು ಜವಾಬ್ದಾರರು? ಯಾರು ಇಲ್ಲ. ಆದರೆ ನಾನು ಹುಡುಗನಾಗಿದ್ದಾಗಲೆ ನನ್ನ ಮದುವೆ ಮಾಡಿದವರು ಯಾರು! ನಾನು ಮೆಟ್ರಿಕ್‌ನಲ್ಲಿ ಓದುತ್ತಿದ್ದಾಗಲೇ ಅಪ್ಪನಾಗಿದ್ದೆ. ಹೀಗೆ ನಮ್ಮ ಮನೆಯಲ್ಲಿದ್ದ ಇಬ್ಬರು ಅಪ್ಪರಿಂದಾಗಿ ಸಂಘರ್ಷ ಅಂದಿನಿಂದಲೇ ಶುರುವಾಗಿತ್ತು.

ನನ್ನ ಕುಟುಂಬಕ್ಕೆ ನನ್ನ ಅಪ್ಪನ ನೌಕರಿಯಿಂದ ಬರುತ್ತಿದ್ದ ಆದಾಯವಲ್ಲದೆ ಬೇರಾವ ಆಧಾರವೂ ಇರಲಿಲ್ಲವೆಂಬ ಮಾತು ನಿಜವೇ. ನಮಗಿದ್ದ ಎರಡು ಮೂರು ಎಕರೆ ಜಮೀನನ್ನು ನನ್ನ ತಾತ ಗಾಂಜ ಕುಡಿಯಲು ನಮ್ಮೂರಿನ ಶ್ರೀಮಂತರು ಮತ್ತು ಸಾಮಂತರ ಬಳಿ ಗಿರವಿ ಇಟ್ಟಿದ್ದಲ್ಲದೆ ತಾನು



ಮಧುಕರಸಿಂಹ

ಬಂಗಾಳದ ಮೇದಿನಿಪುರ ಜಿಲ್ಲೆಯ ಯಾವನೋ ಮಾರ್ವಾಡಿಯ ಬಳಿ ಜವಾನಿಕೆ ಕೆಲಸ ಮಾಡುತ್ತಿದ್ದ. ತಂದೆ ಮನೆಯ ಕಷ್ಟಗಳಿಂದ ಬೇಸತ್ತು ಓಡಿಹೋಗಿ ತನ್ನ ಹದಿನೆಂಟನೆಯ ವಯಸ್ಸಿನಲ್ಲಿ ಜೈಲ್ ಪೋಲಿಸ್ ಆಗಿ ಸೇರಿಕೊಂಡರು. ಅಲ್ಲಿಂದೀಚೆಗೆ ಅಮ್ಮನ ಕಷ್ಟಗಳು ಕ್ರಮೇಣ ಕರಗತೊಡಗಿದವು. ಅವಳ 'ಒಟ್ಟು ಕುಟುಂಬ' ಶಿಥಿಲಗೊಳ್ಳತೊಡಗಿತು. ಮೂವತ್ತಾರು– ಮೂವತ್ತೇಳು ವರ್ಷಗಳ ಕಾಲ ತಾನು ಮಾಡಿದ ಸೇವಾವಧಿಯಲ್ಲಿ ತಂದೆ ಬಹಳಷ್ಟು ಮಾಡಿಕೊಂಡರು. ಮನೆ ಇರಲಿಲ್ಲ, ಮನೆ ಮಾಡಿಕೊಂಡರು, ಜಮೀನನ್ನು ಬಿಡಿಸಿಕೊಂಡರು. ಹೀಗೆ ಅವರ ಬಳಿ ಮೂರುವರೆ ಎಕರೆ ಜಮೀನು ಸಹ ಆಯಿತು. ಅದರಲ್ಲಿ ಅರ್ಧ ಜಮೀನನ್ನು ನಾನು ನನ್ನ ಅಸಹಾಯಕ ಪರಿಸ್ಥಿತಿಯಲ್ಲಿ ಗಿರವಿ ಇಟ್ಟಿದ್ದೇನೆ. ಗಿರವಿ ಇಟ್ಟಿರುವ ಜಮೀನನ್ನು ಬಿಡಿಸಿಕೊಳ್ಳಲು ಎಷ್ಟೋ ಮೈ ಪರಚಿಕೊಂಡರೂ ಆಗುತ್ತಿಲ್ಲ. ಸರ್ಕಾರದಿಂದ ಪಡೆದುಕೊಂಡಿರುವ ಸಾಲವೂ ಬದುಕನ್ನು ಜರ್ಜರಿತಗೊಳಿಸುತ್ತಿದೆ. ನನ್ನ

ಅನುವಾದ : ತಿಪ್ಪೇಸ್ವಾಮಿ

ಸ್ಕೂಲ್ ನೌಕರಿಯಿಂದ ಕೈಗೆ ಇನ್ನೂರ ಮುವತ್ತೆರಡು ರೂಪಾಯಿ ಚಿಲ್ಲರೆ ಬಂದರೂ ಬೆನ್ನು ಬಾಗಿಸುತ್ತಿರುವ ಈ ದುಬಾರಿ ಬೆಲೆಗಳ ಕಾರಣದಿಂದಾಗಿ ಹೊಟ್ಟೆ ತುಂಬಿ ಕೊಳ್ಳುವುದೇ ಕಷ್ಟವಾಗಿದೆ.

1967ರ ಅಭಾವ ಮತ್ತು ಕ್ಷಾಮ! ಬಿಹಾರ್ ಸರ್ಕಾರದ ವತಿಯಿಂದ ಅನೇಕ ಬಗೆಯ ಪರಿಹಾರ ಕಾರ್ಯಗಳನ್ನು ಆರಂಭಿಸಲಾಯಿತು. ದೊಡ್ಡದೊಡ್ಡ ಶ್ರೀಮಂತರು, ಭಾರಿ ರೈತರು, ಜಮೀನ್ದಾರರು (ಬಾಯಿಯಲ್ಲಿ ಹೇಳುವುದಕ್ಕೆ ಜಮೀನ್ದಾರಿ ಪದ್ಧತಿಯನ್ನು ನಿರ್ಮೂಲಗೊಳಿಸಲಾಗಿದೆ!) ಹಾಗೂ ಸಾಮಂತರ ಪರಿಹಾರ ನೀಡಿಕೆ ಯೋಜನೆಗಳನ್ನು ಮತ್ತು ಸರ್ಕಾರಿ ಸೌಲಭ್ಯಗಳನ್ನು ಸೊಗಸಾಗಿ ಲೂಟಿ ಮಾಡಿದರು. ಆದರೆ ಹಸಿದವರು, ಬಟ್ಟೆ ಇಲ್ಲದವರು ನಿರ್ಗತಿಕರು, ದಿಕ್ಕಿಲ್ಲದವರು ಹಾಗೆಯೇ ಒದ್ದಾಡುತ್ತಲೆ ಇದ್ದರು. ಆದರೆ ಇವರ ಜೀವ ಎಷ್ಟು ಗಟ್ಟಿಯಾಗಿವೆಯೆಂದರೆ ಇಂದಿಗೂ ಇವರು ಬದುಕಿದ್ದಾರೆ! ಆ ಸಮಯದಲ್ಲಿ ಪತ್ರಿಕಾ ವರದಿಗಾರನಾಗುವ 'ಲಾಭ' ನನಗೂ ದೊರೆತಿತ್ತು. ಸರ್ಕಾರದಿಂದ ಸಾಲ ತೆಗೆದುಕೊಂಡು ನನ್ನ ಜಮೀನಿನಲ್ಲೂ ಬಾವಿತೋಡಿಸಿ ಪೈಪ್‌ಗಳನ್ನು ಹಾಕಿಸಿದೆ. ನನಗೂ ಕೊಂಚ ಜಮೀನಿದೆ, ಹೊಲ ಗದ್ದೆಗೆ ಸಮೃದ್ಧವಾಗಿ ನೀರು ಸಿಗುತ್ತದೆ, ಹಸಿರು ಮುಕ್ಕಳಿಸುತ್ತದೆ, ಇಲ್ಲಿಗೆ ನನ್ನ ಕಷ್ಟದ ದಿನಗಳು ದೂರವಾಗಿಬಿಡುತ್ತವೆ ಎಂದೆಲ್ಲ ಯೋಚಿಸಿದೆ. ಆದರೆ ಮುಂದೆ ಆದದ್ದೆಲ್ಲ ಇದಕ್ಕೆ ತದ್ವಿರುದ್ಧವೇ. ಇಂದು ಯೋಚಿಸಿದರೆ ನನ್ನಂಥ ಜನಗಳಿಗೆ 'ಹಸಿರು ಕ್ರಾಂತಿ' ಯಿಂದ ಲಾಭಾನ್ವಿತಗೊಳ್ಳುವುದೆಂದರೆ ಅದೊಂದು ಘೋರ ಶಾಪ ಎಂದು ಅನ್ನಿಸುತ್ತದೆ. ನನ್ನ ಚಿಕ್ಕಪ್ಪಂದಿರ ಕ್ರೂರವಾದ ಉಗುರುಗಳು ನನ್ನನ್ನು ಪರಚಿ ಸೀಳಲು ನುಗ್ಗಿ ಬಂದವು. ಊರಿನವರ ಮತ್ತು ನನ್ನ ಚಿಕ್ಕಪ್ಪಂದಿರ ಭೂಮಿ ನನ್ನ ಬಾವಿ ಪೈಪುಗಳಿಂದಾಗಿ ವರ್ಷಾನುಗಟ್ಟಲೆ ಹಸಿರಾಗಿಯೇ ಇರುತ್ತದೆ. ಆದರೆ ನನ್ನ ಹೊಲ ಗದ್ದೆ ಮಾತ್ರ ನೀರಿಗಾಗಿ ಬಾಯಿ ಬಾಯಿ ಬಿಡುತ್ತಿರುತ್ತವೆ. ಬೇಕಾದರೆ ಪಕ್ಕಾ

## ನೀಗ್ರೋ ಗೆಳೆಯನಿಗೆ

ಓ ದೂರದ ನೀಗ್ರೊ ಗೆಳೆಯ
ಏಷಿಯಾಪ್ರಿಕ ಖಂಡಗಳು
ಉತ್ತರ ದಕ್ಷಿಣ ಧ್ರುವಗಳಿಗೆ
ನಡೆಯತೊಡಗಿದ್ದು .......
ನೀನು ನಾನು ದೂರವಾಗಿದ್ದು
ಈ ಧ್ರುವಗಳ ರಾಜಕೀಯ
ಸೆಳೆತಗಳಿಂದಲೆ.... ?
ನಿನ್ನ ಕರಿಯ... ನೀಗ್ರೊ.... ಎಂದು
ನನ್ನ ಪಂಚಮ... ಅಸ್ಪೃಶ್ಯ....
ಎನ್ನುವರಷ್ಟೆ.... ?
ಗೊತ್ತಿಲ್ಲವೆ....?

ನಿನ್ನ ಬಲಿತ ರಟ್ಟೆ
ನನ್ನ ಸಹನೆಯ ಕಟ್ಟೆ
ಏಳು ಖಂಡಗಳಾಗಿದ್ದು ?
ನಾನು ನೀನು ಎಚ್ಚರವಾಗುವುದು
ಸಹಿಸದ ಬಿಳಿ .. ಸವರ್ಣೀಯ
ಸೈತಾನ್ ಕುಂಡಿಗಳು ಹುರಿಯತೊಡಗಿವೆ.

ಈ ಮಂಗಗಳಿಗೆ ಗೊತ್ತಿಲ್ಲವೆ
ದುಡಿವ ಸಂತಾನವೆಲ್ಲ
ಕರಿಯ ಜನರ ನೆರಳೆಂದು....
ನೀಗ್ರೊ ಅಸ್ಪೃಶ್ಯರಿಂದಲೆ
ಈ ಗ್ರಹ ಚೇತನ ಹೊಂದಿರುವುದೆಂದು....?
ಅದಿರಲಿ

ಈಗ ಈ .........
ಗ್ರಹದ ಪಂಚ ಭೂತಗಳ
ಹಿಡಿತದಲ್ಲಿಡೋಣ
ಎತ್ತರ ಬೆಟ್ಟ ಪಾತಾಳ ಕೊಳ್ಳ
ಎಲ್ಲವನ್ನು ಸಮನಾಗಿ ಗುಡಿಸೋಣ....

ಓ ದೂರದ ನೀಗ್ರೊ ಗೆಳೆಯ
ಕಾಲ ಹದವಾಗುತಿದೆ
ಬೇಗ....ಬಾ....ಬೇಗ ಬಾ....
ನಿನಗಾಗಿ ಕಾಯುತಿರುವೆ.

—ಎಂ. ವೆಂಕಟಸ್ವಾಮಿ

# ಬೀದಿಯಲ್ಲಿ ಬೆತ್ತಲೆಗೊಳಿಸಿ ಹೆಣ್ಣುಮಕ್ಕಳ ಮಾನಭಂಗ

ಕೋಲಾರ ಜಿಲ್ಲೆ, ಶ್ರಿನಿವಾಸಪುರ ತಾಲ್ಲೂಕಿನ ಕುಗ್ರಾಮ ಮರಸನಪಲ್ಲಿ. ಭೂಮಿಗಾಗಿ ಹೋರಾಟ ನಡೆಸಿ, ಭೂಮಿಯನ್ನು ಪಡೆದು ಇತಿಹಾಸ ನಿರ್ಮಿಸಿದ ಸಂಗತಿಯನ್ನು ಇಲ್ಲಿನ ಜನತೆ ಇನ್ನೂ ಮರೆತಿಲ್ಲ.

ಹೋರಾಟದ ಲಾವಾಗ್ನಿ ಕರ್ನಾಟಕದ ದಲಿತ ಸಂಘರ್ಷ ಸಮಿತಿಯ ಕೋಲಾರ ಜಿಲ್ಲಾ ಶಾಖೆ ಈ ಮರಸನಪಲ್ಲಿ ಹೋರಾಟದ ಅಂಗವಾಗಿ ಚರಿತ್ರಾರ್ಹ ಜಾತಾ ನಡೆಸಿ. ಇಲ್ಲಿನ ಸವರ್ಣೀಯ ಭೂಸ್ವಾಮಿಗಳು ದ.ಸಂ.ಸ. ವನ್ನು ಕನಸಿನಲ್ಲಿ ನೆನೆದರೂ ಬೆಚ್ಚಿ ಬೀಳುವಂತೆ ಮಾಡಿ, ಮರಸನಪಲ್ಲಿ ದಲಿತರಿಗೆ ಭೂಒಡೆತನ ದಕ್ಕಿಸಿದ್ದು, ಇಲ್ಲಿನ ದಲಿತರು ತಮ್ಮ ಭೂಮಿಯನ್ನು ಉತ್ತು, ಬಿತ್ತುವಷ್ಟರಲ್ಲೇ ಮತ್ತೇ ಇಲ್ಲಿನ ಜಮೀನ್ದಾರ 'ಹಾರವ ಬೇತಾಳ' ರಾಮಮೂರ್ತಿಯ ಚೇಲಾಗಳು ತಮ್ಮ ಅನಿಷ್ಟ ಕೃತ್ಯಗಳನ್ನು ಪ್ರಾರಂಭಿಸಿದ್ದಾರೆ.

ದ್ರೌಪತಿಯನ್ನು ದುಶ್ಯಾಸನ ವಸ್ತ್ರಾಪಹರಣ ಮಾಡಿದ್ದು ಮಹಾ ಭಾರತದ ಹಳೆಯ ಹಳಸಲು ಕತೆ. ಇದೀಗ ಮರಸನಪಲ್ಲಿ ವಸ್ತ್ರಾಪಹರಣದ ಬಗ್ಗೆ ಕೇಳಿದರೆ "ನಾಗರೀಕ ಸಮಾಜ" ಎಂಬ ಭ್ರಮೆಯ ಈ ವ್ಯವಸ್ಥೆಯೆ ನಾಚಿಕೆ ಪಡಬೇಕಾದೀತು.

ಇದೇ 10ನೇ ಮೇ 83ರಂದು, ಮಟಮಟ ಮಧ್ಯಾನ್ಹ ಒಂದು ಗಂಟೆ ಸಮಯದಲ್ಲಿ ಲಕ್ಷಮ್ಮ ಎನ್ನುವ ದಲಿತ ಹೆಣ್ಣುಮಗಳನ್ನು ಅದೇ ಊರಿನ ಸವರ್ಣೀಯ ಜಂತುಗಳಾದ ವೆಂಕಟನಾರಾಯಣ, ಜಯಣ್ಣ, ಬೈಯಣ್ಣ ಎನ್ನುವ ನೀಚರು ನಡುಬೀದಿಯಲ್ಲಿ ಸಂಪೂರ್ಣಬೆತ್ತಲೆ ಮಾಡಿ, ತಲೆಗೆ ತೀವ್ರ, ಗಾಯವಾಗಿ ಪ್ರಜ್ಞೆ ತಪ್ಪುವಂತೆ ಹೊಡೆದಿದ್ದಾರೆ. ಮೈಮೇಲೆ ಕಾಸಗಲದಷ್ಟು ಬಟ್ಟೆಯಿಲ್ಲದಂತೆ ಮಾನಭಂಗ ಮಾಡಿದ ಈ ನರೋಧಮರು ಲಕ್ಷ್ಮಮ್ಮನನ್ನು ಚಪ್ಪಲಿಯಿಂದ ಬೇರೆ ಹೊಡೆದಿದ್ದಾರೆ.

ಈ ಬಗ್ಗೆ ಹತ್ತಿರದ ರಾಯಲ್‌ಪಾಡ್ (ಹೋಬಳಿ) ಪೋಲೀಸ್ ಠಾಣೆಯಲ್ಲಿ ಕಂಪ್ಲೇಂಟ್ ಕೊಟ್ಟಿದ್ದರೂ ಇದುವರೆಗೂಯಾವನೂ ತಿರುಗಿನೋಡಿಲ್ಲ.

ಸಿ. ಎಸ್.ದ್ವಾರಕಾನಾಥ್

ಅಲ್ಲಿನ ದಫೇದಾರನಿಗೆ ಇನ್ನೂರು ರೂಪಾಯಿ ಕೊಟ್ಟರೆ ಈ ಪ್ರಕರಣದ ಬಗ್ಗೆ ಕ್ರಮ ತೆಗೆದ ಕೊಳ್ಳುತ್ತಾನಂತೆ! ಇಲ್ಲದಿದ್ದಲ್ಲಿ "ಹೋಗ್ರೊಲೋ, ನಾನೇನು ನೀಮಿಟ್ಟ ಆಳಲ್ಲ, ನೀವು ಕಂಪ್ಲೇಟ್ ಕೊಟ್ಟಾಗೆಲ್ಲಾ ನಿಮ್ಹಿಂದೆ ಬರೋಕೆ" ಎಂದು ದಿಮಾಖು ಮಾಡುತ್ತಾನೆ.

ಇಂತಹಾ ಬಹಿರಂಗ ಮಾನಭಂಗವನ್ನು ಮಾಡಿದವರು ತಾವೂ ಅಮ್ಮ, ಅಕ್ಕ, ಪತ್ನಿ, ನಾದಿನಿಯರನ್ನು ಹೊಂದಿರುವ ಬಗ್ಗೆ ಒಮ್ಮೆಯಾದರೂ ಜಾಗ್ರತೆಯಾಗಿ ನೋಡಿಕೊಳ್ಳಬೇಕು.

ಇದೇ ಮರಸನಪಲ್ಲಿಯಲ್ಲಿ ಈ ಘಟನೆ ನಡೆಯುವ ಮುಂಚಿನ ದಿನ (9-5-83) ದರಖಾಸ್ತಿನಲ್ಲಿ ದಲಿತರಿಗೆ ಭೂಮಿ ಸಿಕ್ಕಿದ್ದನ್ನು ಸಹಿಸಿಕೊಳ್ಳಲಾರದ ಅದೇ ಊರಿನ ರಾಮಮೂರ್ತಿಯೆಂಬ ಹಾರಾಪಾಸುರ ಚೇಲಾಚಂಚಾಗಳಾದ ಜಿ. ಕೆ. ರಾಮಪ್ಪ ಮತ್ತು ಅವನ ಮಕ್ಕಳೆಂದು ಹೇಳಲಾಗಿರುವವರು ತಿರುಮಳಮ್ಮ ಎಂಬ 32 ವರ್ಷದ ಹೆಣ್ಣುಮಗಳನ್ನು ಸಂಜೆ 5-30ರಲ್ಲಿ ಚಪ್ಪಲಿಯಿಂದ ಹೊಡೆದುದಲ್ಲದೆ ಸಿಕ್ಕಾಪಟ್ಟೆ ಮೈಮೂಳೆ ಮುರಿಯುವಂತೆ ಹೊಡೆದಿದ್ದಾರೆ.

ಇದೇರೀತಿ ದಲಿತರು ಹೊಲೆದುಕೊಟ್ಟ ಚಪ್ಪಲಿಯನ್ನು ದಲಿತರ ಮೇಲೆಯೇ ಪ್ರಯೋಗಿಸುತ್ತಾ ಹೋದರೆ ಒಂದು ದಿನ ಈ ಸವರ್ಣೀಯ ಹಡಚೆ ಮಕ್ಕಳ ಕಾಲಿನ ಕೆರಕ್ಕೂ ಬರಬಂದು ಇವರ ಕಾಲುಗಳು ಬೆತ್ತಲಾಗುತ್ತವೆ. ಆಗ ಚಡಾವು ಹೊಲಿಯುವ ಕೈಯಲ್ಲಿ ಮೇಲ್ಜಾತಿಗಳವರ ಕತ್ತಿನ ಪಟ್ಟಿಗಳಿರುತ್ತವೆ.

ಮೇಲಿನ ಎರಡೂ ಅಮಾನುಷ ಘಟನೆಗಳ ಬಗ್ಗೆ ಕೊಲಾರ ಜಿಲ್ಲಾ ದಲಿತ ಸಂಘರ್ಷ ಸಮಿತಿಯ ಶ್ರೀನಿವಾಸಪುರ ಶಾಖೆ ಹೋರಾಟವನ್ನು ಸಂಘಟಿಸುತ್ತಿದೆ, ಇಲ್ಲಿನ ಸಂಚಾಲಕ, ದಲಿತ ಹಾಡುಗಾರ ಮುನಿಸ್ವಾಮಿ ಇದರ ಮುಂದಾಳತ್ವವನ್ನು ವಹಿಸಿದ್ದಾರೆ.

ಪೈಪ್ ಲೈನ್‌ಗಳನ್ನು ಸಾಲ ತೆಗೆದುಕೊಂಡು ಬೇರೆ ಹಾಕಿಸಿಕೋ ಎಂದು ಇವರು ಹೇಳುತ್ತಾರೆ. ಇದುವರೆಗೆ ಏನು ಹಾಕಿಸಿದ್ದೆನೋ ಅದನ್ನು ರಕ್ಷಿಸಲು ಹಾಗೂ ತೆಗೆದುಕೊಂಡಿದ್ದ ಸಾಲದ ಕಂತುಗಳನ್ನು ಕಟ್ಟಲು ಅರ್ಧ ಜಮೀನು 'ಗಿರವಿ'ಯಲ್ಲೇ ಇದೆ. ನನ್ನಂಥ ಜನಗಳಿಗೆಲ್ಲ ಜಮೀನು, ವ್ಯವಸಾಯ, ಬೆಳೆ ಹೀಗೆಂದುಕೊಂಡು ಅದನ್ನು ಕಿತ್ತು ಬಿಸಾಕಲು ನನ್ನಿಂದಾಗುತ್ತಿಲ್ಲ. ಪೈಪುಗಳನ್ನು ಕೀಳುವಾಗ ಅವುಗಳು ಒಡೆದು ಹೋಗುವ ಸಂಭವವಿದೆ ಎಂದು ಇಂಜನಿಯರ್‌ಗಳು ಹೇಳುತ್ತಾರೆ. ನಿಜ ಹೇಳಬೇಕೆಂದರೆ, ಸರ್ಕಾರದ ಏನೆಲ್ಲ ಯೋಜನೆಗಳಿವೆಯೋ ಅವೆಲ್ಲ ಶ್ರೀಮಂತರಿಗೆ, ಜಮೀನ್ದಾರರಿಗೆ ಹಾಗೂ ಭಾರಿ ರೈತರಿಗಾಗಿವೆ. ಸರ್ಕಾರದ ಯಾವೊಂದು ಯೋಜನೆಯ ಸೌಲಭ್ಯವೂ ಬಡವರ ಕೂಲಿಕಾರರ ಬಳಿಗೆ ಬರಲು ಬಿಡುವುದಿಲ್ಲ. ಹೇಗೋ ಒಂದುವೇಳೆ ಒಂದೆರಡು ಇವರ ಬಳಿಗೆ ಬಂದವು ಎಂದಿಟ್ಟುಕೊಂಡಿರುವುವು ಅಭಿಶಾಪವಾಗಿ ಕುಟುಕಲಾರಂಭಿಸುತ್ತವೆ ಆ ಪೈಪುಗಳು ಶೈಲಾಕ್ ರೀತಿಯಲ್ಲಿ ಇಂದಿಗೂ ನನ್ನ ರಕ್ತವನ್ನು ಹೀರುತ್ತಿವೆ, ಇನ್ನು ಎಷ್ಟು ದಿನಗಳವರೆಗೆ ಕುಡಿಯುತ್ತಿರುತ್ತವೋ ಗೊತ್ತಿಲ್ಲ.

• • •

ಈ ದಿನಗಳಲ್ಲಿ ಒಂದು ಅಲ್ಪ ಸಂಖ್ಯಾತರ ಸ್ಕೂಲ್‌ನಲ್ಲಿ ನಾನು ಶಿಕ್ಷಕನಾಗಿದ್ದೇನೆ. ಇಲ್ಲಿ ನಾನು ನನ್ನ ಇಪ್ಪತ್ತೆರಡು ಸಾವಿರ ಶಿಕ್ಷಕ ಬಂಧುಗಳ ಜೊತೆ ಕುಳಿತು ನಮ್ಮ ಸಮಸ್ಯೆಗಳ ಬಗೆಗೆ ವಿಚಾರ ವಿಮರ್ಶೆ ಮಾಡುವುದು ಅಪರಾಧ. ನಮ್ಮ ಸಂಘದ ಕಾರ್ಯಕರ್ತರೊಡನೆ ಓಡಾಡುವುದು ಹಾರ್ದಿಕ ಸಂಬಂಧಗಳನ್ನಿಟ್ಟುಕೊಳ್ಳುವುದು 'ರಾಜಕೀಯ' ವೆಂದು ಪರಿಗಣಿಸಲಾಗುತ್ತದೆ. ಹೀಗಾಗಿ ಇಲ್ಲಿ ನಾನು ನನ್ನನ್ನು ಶಿಕ್ಷಕನೆಂದು ಪರಿಗಣಿಸದೆ ಒಬ್ಬ ನೌಕರನೆಂದೇ ಪರಿಭಾವಿಸಿಕೊಂಡಿದ್ದೇನೆ. ಮನಸ್ಸಿನಲ್ಲಿನ 'ಭಾವುಕತೆ' ಹಿಂಸಿಸತೊಡಗುತ್ತದೆ. ಆಗ ಈ ಸ್ಕೂಲ್‌ನ್ನು ಬಿಟ್ಟು ಬೇರೆ ಇನ್ನಾವುದಾದರೊಂದು ನೌಕರಿ ಹಿಡಿಯೋಣ ಎಂದು ಅನ್ನಿಸುತ್ತದೆ ಯಾದರೂ ಎಲ್ಲಿದೆ ಇನ್ನೊಂದು ನೌಕರಿ ? ಇಂಥ ಅಪಮಾನಗಳನ್ನು ಸಹಿಸುತ್ತಿರುವವರು ನನ್ನಂತೆ ಇನ್ನೂ ಬಹಳಷ್ಟು ಜನರಿರಬಹುದಲ್ಲವೆ ಎಂಬ ಯೋಚನೆ ಬರುತ್ತದೆ. ತಪ್ಪನ್ನು ಕಂಡೂ ಕಣ್ಣು ಮುಚ್ಚಿಕೊಂಡು ಕುರ್ಚಿಯ ಸುತ್ತ ಮುತ್ತ ಹಾಕುವ ಮಂದಿಯೂ ಇರಬಹುದಲ್ಲ ? ಈ ಮಧುಕರಸಿಂಹ ಎಂಥ ಪ್ರಾಣಿ ನೋಡಿ ತನ್ನ ಕತೆಯಲ್ಲಾದರೂ ಅಪಮಾನದ ವಿರುದ್ಧ ಸಿಡಿದೇಳುವಂತ ಬರೆಯುತ್ತಾನೆ ಆದರೆ ತನ್ನ ಸ್ವಂತ ಬದುಕಿನಲ್ಲಿ ಅದನ್ನು ಸಹಿಸಿಕೊಳ್ಳುತ್ತಾನೆ ಎಂದು ಜನ ಮಾತಾಡುತ್ತಿರಬಹುದಲ್ಲ ? ಒಟ್ಟಿನಲ್ಲಿ ಇದಕ್ಕೇನು ಕಾರಣ ? ಇಡೀ ಹಿಂದೂಸ್ಥಾನದ ಜನ ಮಾತನಾಡುತ್ತಿರಬಹುದಲ್ಲ ? ಒಟ್ಟಿನಲ್ಲಿ ಇದಕ್ಕೇನು ಕಾರಣ ? ಇಡೀ ಹಿಂದೂಸ್ಥಾನದ ಜನ ತುತ್ತು ಅನ್ನಕ್ಕಾಗಿ ಏನೆಲ್ಲವನ್ನೂ ಸಹಿಸಿಕೊಳ್ಳುತ್ತಾರೆ, ಮಧುಕರಸಿಂಹ ಸಹ ಅಷ್ಟು ಜನರಲ್ಲಿ ಒಬ್ಬ ತಾನೇ ಎಂಬ ನೆಪವೊಡ್ಡಿ ಸಂತೋಷಪಡಬಹುದು. ಇಲ್ಲ ಅಪಮಾನಿತರಾದಂಥ ಅನುಭವ ಪಡೆಯಬಹುದು. ನಾನು ನನ್ನ ಬದುಕಿನ ಮೂವತ್ತೊಂಭತ್ತನೆಯ ವಯಸ್ಸಿನಲ್ಲಿ ಕಾಲಿಡುತ್ತಿದ್ದೇನೆ, ಈ ಕ್ಷಣದಲ್ಲೂ ನೌಕರಿ ಹುಡುಕುತ್ತಿದ್ದೇನೆ. ಈ ನೌಕರಿಗಾಗಿ ಸಾಮಾನ್ಯ ಭಾರತೀಯ ಪ್ರಜೆಯಂತೆ ಈಗಲೂ ಕಷ್ಟ-ಕೋಟಲೆಗಳನ್ನನುಭವಿಸುತ್ತಿದ್ದೇನೆ. ಈ ದೇಶದಲ್ಲಿ ರಾಷ್ಟ್ರೀಕರಣದ ಲಾಭ ಸಹ ಪುರೋಹಿತಶಾಹಿ ಮತ್ತು ಸಾಮಂತ ವರ್ಗಕ್ಕೆ ಆಗಿ ಸರ್ಕಾರಿ ಅಥವಾ ಚಿಕ್ಕ-ಪುಟ್ಟ ಸ್ವತಂತ್ರ ಸಂಸ್ಥೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರ ಬದುಕು ನರಕ ಸದೃಶವಾದರೆ ಇದರಲ್ಲೇನು ಆಶ್ಚರ್ಯ ? ಇಷ್ಟೆಲ್ಲ ಸಹಿಸಿಕೊಂಡು ಸಹ ಬೆಳಗಾದರೆ ಹೊಟ್ಟೆಯ ಬಗ್ಗೆ ನಮ್ಮೆಲ್ಲ ಯೋಚನೆಗಳು ಕೇಂದ್ರೀಕೃತವಾದರೆ ಬೇರೇನೂ ಮಾತಾಡಲೂ ಸಾಧ್ಯವಾಗುತ್ತದೆ ? ನನ್ನಂಥ ಲೇಖಕರು ತಮ್ಮ ಲೇಖಕೀಯ ಬದುಕಿನಿಂದ ದೂರ ಉಳಿಯಬೇಕು. ಇಲ್ಲ ತಮ್ಮ ಅಸ್ತಿತ್ವಕ್ಕಾಗಿ ಸಂಘ

## ಅನುಭವದ ಗಣಿಯಿಂದ

ರ್ಷಿಸುತ್ತಿರುವ ಜನತೆಯೊಡನೆ ನೇರವಾಗಿ ಧುಮುಕಬೇಕು! ವ್ಯವಸ್ಥೆ ನಮ್ಮನ್ನು ಛಿದ್ರ-ಛಿದ್ರಗೊಳಿಸಿ ವ್ಯಕ್ತಿ-ವ್ಯಕ್ತಿಯಿಂದ ದೂರಗೊಳಿಸಿಬಿಟ್ಟಿದೆ. ಸಧ್ಯದ ಪರಿಸ್ಥಿತಿಯಲ್ಲಿ ಜನತೆಯನ್ನು ಕ್ರಿಯಾಶೀಲವಾಗಿಡುವಂಥ ಯಾವ ರಾಜಕೀಯ ಪಾರ್ಟಿಗಳು ಕಣ್ಣಿಗೆ ಬೀಳುತ್ತಿಲ್ಲ. ಈ ಎಲ್ಲದರ ಬಗೆಗಿರುವ ಮಾನಸಿಕ ತಳಮಳ ಮತ್ತು ಕೋಪದಿಂದಾಗಿ ಲೇಖಣಿ ಕೈ ಬಿಡುತ್ತದೆ! ಒಂದೆಡೆ ಬಂಡವಾಳಶಾಹಿ ವ್ಯವಸ್ಥೆಯ ಮುಖಗಳು, ತಮ್ಮ ನೂರಾರು ಕೈಗಳನ್ನು ಚಾಚಿ ಮುಂದೆ ನುಗ್ಗಿ ಬರುತ್ತಿವೆಯಾದರೆ ಇನ್ನೊಂದೆಡೆ 'ಮಧ್ಯೆ ಮಧ್ಯೆ ಗರೀಬಿ ಹಟಾವೊ' ಘೋಷಣೆ ಕೂಗುತ್ತ ತನ್ನ ಗಂಟಲು ಹರಿದುಕೊಳ್ಳುತ್ತದೆ. ಲೇಖನಿಯ ಮೂಲಕ ನಾವು ಭ್ರಮೆಗಳನ್ನು ಹಬ್ಬಿಸುತ್ತಿದ್ದೇವೆನೋ. ಇಲ್ಲಿ ಅತ್ಯಂತ ವಿಚಿತ್ರವಾದ ಸಂಕಷ್ಟವೆಂದರೆ ನನ್ನಲ್ಲಿನ ಬಹಳಷ್ಟು ರಾಜಕೀಯ ಮಂದಿ ಅಧಿಕಾರ ಲೋಭಿಗಳಾಗಿರುವಾಗ ಹಾಗೂ ಬುದ್ಧಿಜೀವಿಗಳು ಸುಳ್ಳರು ಮತ್ತು ಸ್ವಾರ್ಥಸಾಧಕರಾಗಿರುವಾಗ ಶ್ರೀ ಸಾಮಾನ್ಯನ ಹೋರಾಟಕ್ಕೆ ಶಕ್ತಿ ಬರುವುದಾದರೂ ಎಲ್ಲಿಂದ ?

• • •

ಅಭಾವಗಳು ನನ್ನನ್ನು ನಿರಂತರವಾಗಿ ಬರೆಯಲು ಕುಮ್ಮಕ್ಕು ನೀಡಿವೆ. ಅಂತೆಯೇ ನಾನು ನನ್ನ ಓದು-ಬರಹಬಾರದ, ಹಳ್ಳಿಯ ಹೆಂಡತಿಗೆ ಕೃತಜ್ಞನಾಗಿದ್ದೇನೆ. ಏಕೆಂದರೆ ತಾನು ದುಃಖ ಅನುಭವಿಸಿ ನನ್ನಲ್ಲಿರುವ ಲೇಖಕನನ್ನು ಜೀವಂತವಾಗಿಟ್ಟಿದ್ದಾಳೆ. ಬಾಲ್ಯದಲ್ಲಿ ಮದುವೆಯಾದ್ದರಿಂದಲೇ ಏನೋ ನನ್ನ ಹೆಂಡತಿ ನನಗಿಂತಲೂ ಬಹುಶಃ ಒಂದು ವರ್ಷ ದೊಡ್ಡವಳು. ಈ ಕಾರಣದಿಂದಲೂ ಸಹ ನನ್ನ ಹೆಂಡತಿಯಿಂದ ನನಗೆ ಸ್ನೇಹ ಮತ್ತು ಸಂರಕ್ಷಣೆ ನಿರಂತರವಾಗಿ ಲಭ್ಯವಾಗಿದೆ. ಆಕೆ ಇಲ್ಲದಿದ್ದರೆ ನಾನು ಬದುಕುತ್ತಿರಲಿಲ್ಲ. ನಾನು ಬಿ. ಎ. ಓದುತ್ತಿದ್ದಾಗ ಪರೀಕ್ಷಾ-ಶುಲ್ಕ ಕಟ್ಟಲು ನನ್ನ ಬಳಿ ಹಣ ಇರಲಿಲ್ಲ, ನನ್ನ ಹೆಂಡತಿ ತನ್ನೆಲ್ಲ ಒಡವೆಗಳನ್ನು ಮಾರಿದಳು. ಅಂದಿನಿಂದ ಇಂದಿನವರೆಗೆ ಆಕೆಯ ಮೈಮೇಲೆ ಗಾಜಿನ ಬಳೆಗಳ ಹೊರತಾಗಿ ಬೇರೇನೂ ಇಲ್ಲ. ಸಾಲ ಮತ್ತು ಬದುಕಿನ ಬೇಡಿಕೆಗಳ ನಡುವೆ ನಾನು ಕತೆಗಳನ್ನು ಬರೆಯುತ್ತೇನೆ. ಈ ನನ್ನ ಲೇಖನಿಗೆ ಇಂಬಾಗಿ, ಶಕ್ತಿಯಾಗಿ ಬರುತ್ತಾಳೆ. ಆಗ ಕುಳಿತಾಗ, ನಿಂತಾಗ, ಹೊಲಗದ್ದೆಯಲ್ಲಿ, ಸ್ಕೂಲಿನಲ್ಲಿ, ಸಮಯ ಮತ್ತು ಅವಕಾಶ ಸಿಕ್ಕಡೆಯಲ್ಲಿ ಬರೆಯುತ್ತೇನೆ. ಇಂದಿನವರೆಗೆ ಇಂಥ ಜಾಗದಲ್ಲೇ, ಇಂಥಾ ಸಮಯದಲ್ಲೇ ಬರೆದಿದ್ದೇನೆ ಎಂದು ಹೇಳುವಂತಿಲ್ಲ. ಮನೆಕಡೆಯಿಂದ ಶ್ರೀಮಂತರು, ವಿಶ್ವ ವಿದ್ಯಾನಿಲಯಗಳಿಂದ ಕೈತುಂಬಾ ಸಂಬಳ ಪಡೆಯುತ್ತಿರುವ ನನ್ನ ಕೆಲವು 'ಕ್ರಾಂತಿಕಾರಿ' ಮಿತ್ರರು ನನ್ನ ಲೇಖನವನ್ನು ಕುರಿತು ವ್ಯಾವಸಾಯಿಕ ಹಾಗೂ ನನ್ನನ್ನು ವ್ಯವಸ್ಥೆಯ ಚಟಕಾರಿ ಲೇಖಕ ಎಂದು ತಮಾಷೆ ಮಾಡುತ್ತಾರೆ. ನಾನು ಇದೆಲ್ಲವನ್ನು, ನನ್ನ ನೌಕರಿಯಿಂದಾಗಿ ಆಗುತ್ತಿರುವ ಅಪಮಾನವನ್ನು ಸಹಿಸಿಕೊಳ್ಳಲು ಹೇಗೆ ಅಸಹಾಯಕನಾಗಿದ್ದೇನೋ ಹಾಗೆಯೇ ಈ ಮಾತುಗಳನ್ನು ಸಹಿಸಿಕೊಳ್ಳುತ್ತೇನೆ. ಆದರೆ, ವ್ಯವಸ್ಥೆ ಮತ್ತು ಸೃಷ್ಟಿಕ್ರಮ ನನ್ನ ಪ್ರಾಮಾಣಿಕತೆಯನ್ನು ನಿಯಂತ್ರಿಸತೊಡಗುವ ದಿನದಿಂದ ನಾನು ನನ ಸೃಜನಕ್ರಿಯೆಯನ್ನು ಬಿಡುತ್ತೇನೆ, ಆದು ತಲೆಬಾಗಲು ಮಾತ್ರ ಬಿಡುವುದಿಲ್ಲ.

ಆನೇಕ ಸ್ಕೂಲುಗಳಲ್ಲಿ ನಾನು ನೌಕರಿ ಮಾಡಿದ್ದೇನೆ. ಆದರೆ ಕೆಲವು ಕಡೆ ರಾಜಕೀಯದಲ್ಲಿ ಭಾಗವಹಿಸಿದ್ದರಿಂದ, ಇನ್ನು ಕೆಲವು ಕಡೆ ಜಾತಿ-ಪಂಗಡಗಳ ಕಾರಣದಿಂದ ಹೊರಹಾಕಲ್ಪಟ್ಟಿದ್ದೇನೆ. ಆದರೆ ಮಾಡಲ್ ಸ್ಕೂಲ್‌ನಲ್ಲಿ ನನ್ನಂಥ ಒಬ್ಬ ಲೇಖಕನನ್ನು ಶಿಕ್ಷಕನನ್ನಾಗಿರಿಸಿಕೊಳ್ಳುವುದು ಹೆಮ್ಮೆಯ ಸಂಗತಿ ಎಂದು ಭಾವಿಸಿ ನೌಕರಿ ಕೊಟ್ಟರು. ಆದರೆ ಎರಡೂವರೆ ವರ್ಷಗಳವರೆಗೆ ನಾನು ಅಲ್ಲಿ ಕಲಿಸಿದ ನಂತರ ನನ್ನನ್ನು ತೆಗೆದು ಹಾಕಿದರು ಏಕೆಂದರೆ. ಇಂದಿಗೂ ಯಾವ ಜಾತಿಯ ಅಧಿಪತ್ಯ ಆ ಸ್ಕೂಲ್ ಮೇಲಿದೆಯೋ ವಿಶಿಷ್ಟ ಜಾತಿಗೆ ನಾನು ಸೇರಿದವನಾಗಿರಲಿಲ್ಲ. (ಮುಂದುವರೆಯುತ್ತದೆ)

# ಉಪಜಾತಿಗಳ ಸುಳಿಗಳಲ್ಲಿ ಒರಿಸ್ಸಾ ರಾಜ್ಯದ ದಲಿತರು

ಐತಿಹಾಸಿಕವಾಗಿ ಪ್ರಸಿದ್ಧಿಯನ್ನು ಪಡೆದಿರುವ ಹೆಚ್ಚಿನ ಸಂಖ್ಯೆಯಲ್ಲಿ ಆದಿವಾಸಿಗಳನ್ನು ಹೊಂದಿರುವ ಒರಿಸ್ಸಾ ರಾಜ್ಯದ ದಲಿತರು ಅಸಂಘಟಿತರಾಗಿದ್ದಾರೆ. ರಾಜ್ಯದಲ್ಲಿ 14% ಪರಿಶಿಷ್ಟ ಜಾತಿಗಳವರಿದ್ದರೆ ಪರಿಶಿಷ್ಟ ವರ್ಗಗಳವರ ಜನಸಂಖ್ಯೆಯು 24% ಇದೆ. ಒಟ್ಟು 13 ಜಿಲ್ಲೆಗಳನ್ನು ಹೊಂದಿರುವ ರಾಜ್ಯದಲ್ಲಿ ಕಟಕ್, ಭುವನೇಶ್ವರಿ, ಪುರಿಗಳಂಥ ಜಿಲ್ಲೆಗಳು ಮುಂದುವರೆದವುಗಳಾಗಿದ್ದರೆ ಅತ್ಯಂತ ಹಿಂದುಳಿದ ಜಿಲ್ಲೆ ಕಾಂರ್ಝಾರ್ ಆಗಿದೆ. ಮಯೂರ್ ಭಂಜ್ ಜಿಲ್ಲೆಯ ಇಡೀ ಜನಸಂಖ್ಯೆಯ 63% ಭಾಗ ಆದಿವಾಸಿಗಳಿದ್ದಾರೆ. ಈ ಜಿಲ್ಲೆಯ ಆದಿವಾಸಿಗಳಲ್ಲಿ ಸಂಥಾಲ್ ಎಂಬ ಪಂಗಡ ಹೆಚ್ಚು ಪ್ರಭಾವ ಹೊಂದಿದೆ. ಈ ಜಿಲ್ಲೆಯ ಪ್ರೌಢಶಾಲೆಗಳಲ್ಲಿ ಅರ್ಧದಷ್ಟು ಆದಿವಾಸಿ ಮಕ್ಕಳು ಅಭ್ಯಾಸ ಮಾಡುತ್ತಿದ್ದಾರೆ.

ರಾಜ್ಯದ ದಲಿತ ಶಾಸಕರಲ್ಲಿ ಒಬ್ಬರೂ ಸಹ ವಿರೋಧ ಪಕ್ಷಗಳಲ್ಲಿಲ್ಲ. ಎಲ್ಲರೂ ಕಾಂಗ್ರೆ ಚೇಲಾಗಳಿದ್ದು ರಾಜ್ಯದ ದಲಿತರ ತೊಂದರೆಗಳ ಬಗ್ಗೆ ಯಾವುದೇ ರೀತಿಯ ಕೆಲಸ ಮಾಡುತ್ತಿಲ್ಲ. ಡಾ|| ಅಂಬೇಡ್ಕರ್ ಸಂಘ, ಹರಿಜನ–ಗಿರಿಜನ ಶಾಸಕ ಕಲ್ಯಾಣ ಸಮಿತಿಗಳನ್ನು ಮಾಡಿಕೊಂಡು ಮುಖ್ಯಮಂತ್ರಿ ಜೆ. ಬಿ. ಪಟ್ನಾಯಕ್‌ನ ಬಳಿ ಕೈ ಹೊಸೆಯುತ್ತ ಎಲ್ಲರೂ ನಿಂತಿದ್ದಾರೆ. ಒಬ್ಬ ಮಾಜಿ ಶಾಸಕರಾದರೂ ಸರಿ, ಕಾಂಗ್ರೆಸ್ಸಲ್ಲಿರದವರನ್ನು ಕಾಣಲು ಮಾಡಿದ ಯತ್ನ ಕೂಡ ಕೈಗೂಡಲಿಲ್ಲ.

ರಾಜ್ಯದ ದಲಿತರ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಉತ್ಕಲ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳನ್ನು (ಮಯೂರ್‌ಭಂಜ್, ಕ್ಯಾಂರ್ಝಾರ್‌s ಪುರಿ, ಕಟಕ್, ಭುವನೇಶ್ವರ ಜಿಲ್ಲೆಗಳವರು) ಇತ್ತೀಚೆಗೆ Orissa Administration Service ನಲ್ಲಿ ಆಯ್ಕೆ ಹೊಂದಿರುವ ಅಧಿಕಾರಿಗಳನ್ನು ನಾನ ಭೇಟಿ ಮಾಡಿದೆ. ದಲಿತ ವಿದ್ಯಾರ್ಥಿಗಳೂ ಸಹ ಸಂಪೂರ್ಣವಾಗಿ ಅಸಂಘಟಿತರಾಗಿದ್ದಾರೆ. ದಲಿತರಲ್ಲೇ ಇರುವ ಒಳಜಾತಿಗಳು ಒಂದಾಗುವ ಕೆಲಸವಾಗಿಲ್ಲ. ದಲಿತ ರಾಜಕಾರಣಿಗಳು ಪೂರ್ಣವಾಗಿ ಪಕ್ಷ ರಾಜಕೀಯದಲ್ಲಿ ನಿರತರಾಗಿದ್ದಾರೆ. ಬ್ರಾಹ್ಮಣರ ಹೆಚ್ಚಿನ ಪ್ರಭಾವ ಹೊಂದಿರುವ ಪುರಿ ಜಿಲ್ಲೆ ಹೊರತು ಉಳಿದ ಜಿಲ್ಲೆಗಳಲ್ಲಿ ಅಸ್ಪೃಶ್ಯತೆ ಆಚರಣೆ ತೀರಾ ಕಮ್ಮಿ. 'ದಲಿತರ ಮೇಲೆ ಇಲ್ಲಿ ದಬ್ಬಾಳಿಕೆಯೂ ಕಮ್ಮಿ' ಎಂಬ ಒಬ್ಬ ವಿದ್ಯಾರ್ಥಿಯ ಅಭಿಪ್ರಾಯದ ಹಿನ್ನೆಲೆಯಲ್ಲಿ ಒಂದು ಸತ್ಯಾಂಶವಿದೆ. ಅದೆಂದರೆ ರಾಜ್ಯದ ಸಂಘಟಿತರಾಗುವ ಯಾವುದೇ ಯತ್ನ ಮಾಡಿಲ್ಲ. ಇರುವಂಥ ಆರ್ಥಿಕ-ಸಾಮಾಜಿಕ ಅಸಮಾನತೆಯನ್ನು ಪ್ರಶ್ನಿಸುವ, ಪ್ರತಿಭಟಿಸುವ ಯತ್ನ ಮಾಡಿಲ್ಲ. ಭೂಸುಧಾರಣಾ ಕಾನೂನಿನ ಪ್ರಯೋಜನ ದಲಿತರಿಗೆ ಎಳ್ಳಷ್ಟೂ ಆಗಿಲ್ಲ. ನೀರಾವರಿ ಸೌಲಭ್ಯ ಹೊಂದಿರುವ ಐದು ಜಿಲ್ಲೆಗಳ ದಲಿತರ ಆರ್ಥಿಕ ಸ್ಥಿತಿ ಮಾತ್ರ ಚಿಂತಾಜನಕವಾಗಿಲ್ಲ. ಉಳಿದ ಎಲ್ಲಾ ಜಿಲ್ಲೆಗಳ ದಲಿತರು ಕೃಷಿಕೂಲಿಕಾರರಾಗಿ, ಹಿಡುವಳಿದಾರರಾಗಿ ಗೇಯುತ್ತಿದ್ದಾರೆ. ರಾಜ್ಯದ ತುಂಬಾ ತುಂಬಿಕೊಂಡುಬಿಟ್ಟಿರುವ ದೇವಸ್ಥಾನಗಳಿಂದಾಗಿ ಬ್ರಾಹ್ಮಣರಿಗೆ ಭಾರಿ ಗ್ರೇಡ್ ಬಂದಿದೆ. ಮಧ್ಯಮ ಜಾತಿಗಳಾದ ಪಟ್ನಾಯಕ್-ಮೊಹಾಂಟಿಗಳ ಕೈಯಲ್ಲಿ ಭೂಮಿ ಸಿಕ್ಕಿಕೊಂಡಿದೆ. ನಂದಿನಿ ಸತ್ಪಥಿ ಆಡಳಿತದೊಂದಿಗೆ ಬ್ರಾಹ್ಮಣರ ಆಡಳಿತ ಮುಗಿದು ಪಟ್ನಾಯಕ್ ಥರದ ಮಧ್ಯಮ ಜಾತಿಗಳ ಹಿಡಿತದಲ್ಲಿ ರಾಜ್ಯ ಆಡಳಿತ ನಡೆಯುತ್ತಿದೆ.

## ಹೊರ ರಾಜ್ಯಗಳಲ್ಲಿ

ರಾಜ್ಯದಲ್ಲಿ ಹೆಚ್ಚಿನ ಜನಸಂಖ್ಯೆಯಲ್ಲಿರುವ ಪರಿಶಿಷ್ಟ ವರ್ಗಗಳೂ ಸಹ ಸಂಥಾಲ್, ಹೋರಿ ಮುಂಡ, ಓರಾಂವ್, ಬಾಥೋಡಿ, ಕಂಧಾ, ಮುಂತಾದ ಹಲವಾರು ಉಪಜಾತಿಗಳಲ್ಲಿ ಹರಿದು ಹಂಚಿ ಹೋಗಿವೆ. ಇಡೀ ಜಾತಿಪದ್ಧತಿಯಂತೆ ತಮ್ಮ ತಮ್ಮಲ್ಲೇ ಪ್ರತ್ಯೇಕತೆಯನ್ನು ಈ ವಿವಿಧ ವರ್ಗಗಳು ಕಾಪಾಡಿಕೊಳ್ಳುತ್ತಿವೆ. ಪ್ರತ್ಯೇಕ ವರ್ಗಕ್ಕೆ ತನ್ನದೇ ಆದಂಥ ಒಂದು ಭಾಷೆ, ಸಂಸ್ಕೃತಿ ಇರುವುದರಿಂದ ಈ ಪ್ರತ್ಯೇಕತೆ ಉಳಿಯಲು ಇನ್ನೂ ಸಹಕಾರಿಯಾಗಿದೆ. ಸಂಥಾಲ್ ಆದಿವಾಸಿ ಪಂಗಡಕ್ಕೆ ವಿಶೇಷ ಮಹತ್ವ ಕೊಡುವ ಝಾರಖಂಡ ಪಕ್ಷದ ದಟ್ಟ ಪ್ರಭಾವ ಈ ರಾಜ್ಯದವರ ಮೇಲೆ ಆದಂತಿಲ್ಲ. ಟಾಟಾ ನಗರದ ಬಳಿಯ ರೈರಂಗಪುರದಲ್ಲಿ ಆಸೆಕೋ (Adivasi Socio-Educational and cultural organisation) ಎಂಬ ಸಂಸ್ಥೆ ಯಿದ್ದರೂ ಅದು ಸಂಥಾಲಿ ಪಂಗಡದ ಬಗ್ಗೆ ಮಾತ್ರ ಹೆಚ್ಚು ಗಮನ ಕೊಡುತ್ತಿದೆ. ಇದೇ ಥರ ಋರ್ಕೇಲಾದಲ್ಲಿ Adivasi & Harijan Welfare Association ಇದೆ. ಇವೂ ಸಹ ಸಕ್ರಿಯವಾಗಿ ಕೆಲಸ ಮಾಡುತ್ತಿಲ್ಲ. ಮಯೂರ್‌ಭಂಜ್ ಜಿಲ್ಲೆಯಲ್ಲಿ ಆದಿವಾಸಿ ಜನಸಂಖ್ಯೆ ಹೆಚ್ಚಿರುವುದರಿಂದ ಇರುವ 10 ವಿಧಾನಸಭಾ ಕ್ಷೇತ್ರಗಳಲ್ಲಿ 9 ಮೀಸಲು ಕ್ಷೇತ್ರಗಳಾಗಿವೆ. (1977 ರಲ್ಲಿ 10ರಲ್ಲಿ 4ನ್ನು ಜನತಾ ಪಕ್ಷ ಗೆದ್ದಿದ್ದರೆ 1980 ರ ಚುನಾವಣೆಗಳಲ್ಲಿ 10 ರಲ್ಲಿ ಒಂದನ್ನೂ ಸಹ ಗೆದ್ದಿಲ್ಲ) ಆದಾಗ್ಯೂ ಆದಿವಾಸಿ ಜನತೆ ಸಂಘಟನೆಯಾಗಿಲ್ಲ.

ಪರಿಶಿಷ್ಟ ಜಾತಿಗಳಲ್ಲಿ ಚಮ್ಮಾರರು ಬಹು ಸಂಖ್ಯೆಯಲ್ಲಿದ್ದಾರೆ. ಆದಿವಾಸಿ ಜನರು ತಮ್ಮನ್ನು ಕೀಳು ದೃಷ್ಟಿಯಿಂದ ನೋಡುವರೆಂದು ತೀವ್ರ ಬೇಸರ ಪರಿಶಿಷ್ಟ ಜಾತಿಗಳ ಜನರಲ್ಲಿದೆ. ರಾಜ್ಯದ Chief Secretary ದಲಿತರಾದ್ದರಿಂದ ಕೆಲವು ಅನುಕೂಲತೆಗಳಾಗಿವೆಯೆಂಬುದು ಪ.ಜಾತಿಗಳವರ ಅಭಿಪ್ರಾಯವಾಗಿದೆ. Back Logue ನ್ನು ತುಂಬಲೆಂದು 1982 ರಲ್ಲಿ 84 ಜನರನ್ನು O. A. S. ನಲ್ಲಿಯೂ 84 ಜನರನ್ನು Orissa Finance Service ನಲ್ಲಿಯೂ, 70 ಜನರನ್ನು Orissa co-oprative Service ನಲ್ಲಿಯೂ ಭರ್ತಿ ಮಾಡಲಾಗಿದೆ. ಇವರಿಗೆ ಜಗಜೀವನರಾಂ ಒಬ್ಬರೇ ದಲಿತ ನಾಯಕರಾಗಿ ಕಾಣುತ್ತಿದ್ದಾರೆ.

ದಲಿತ ವಿದ್ಯಾರ್ಥಿಗಳೂ ಸಹ ಇತರ ರಾಜ್ಯಗಳಲ್ಲಿಯ ದಲಿತ ಸಂಘಟನೆಗಳ ಬಗ್ಗೆ ಯೋಚಿಸಿಲ್ಲ. ಗ್ರಾಮೀಣ ಭಾಗದಲ್ಲಿ ಡಾ. ಅಂಬೇಡ್ಕರ್ ಅವರ ಹೆಸರು ಕೇಳಿಲ್ಲ. ವಿದ್ಯಾರ್ಥಿಗಳ ಸಂಘಟನೆಯಿಲ್ಲ. ಉತ್ಕಲ್ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದ ಅಧ್ಯಕ್ಷ ಮೋಹನ್‌ಜೆನಾ ದಲಿತ ವಿದ್ಯಾರ್ಥಿಯೆಂದು ತಿಳಿದು (S. U. C. I. ಎಂಬ ಕಮ್ಯುನಿಸ್ಟ್ ಪಕ್ಷದ ಬೆಂಬಲ ಪಡೆದು ಗೆದ್ದವರು) ಭೇಟಿಯಾಗಲು ಯತ್ನಿಸಿದಾಗ ಅವರು ಕಲಕತ್ತೆಗೆ ಹೋಗಿರುವುದು ತಿಳಿಯಿತು.

ವಿದ್ಯಾರ್ಥಿ ಮಿತ್ರರೊಂದಿಗೆ ಸುದೀರ್ಘವಾಗಿ ಮಾತುಕತೆ ನಡೆಸಿದಾಗ, ಸಂಘಟನೆಯ ಮಹತ್ವವನ್ನು ಅರ್ಥ ಮಾಡಿಕೊಂಡು ಬರುವ ಶೈಕ್ಷಣಿಕ ವರ್ಷದಿಂದ ಮೊದಲು ದಲಿತ ವಿದ್ಯಾರ್ಥಿಗಳನ್ನು ಸಂಘಟಿಸುವ ಯತ್ನ ಮಾಡುವುದಾಗಿ ದಲಿತ ಮಿತ್ರರು ಭರವಸೆ ನೀಡಿದರು.

ಮಂಗ್ಳೂರ ವಿಜಯಾ

"ಮೂವತ್ತು ಕೋಟಿ ಮುಖಗಳು,

ಆದರೂ ಹೃದಯ ಒಂದೇ

ಮಾತಾಡಲು ಹದಿನೆಂಟು ಭಾಷೆ

ಆದರೂ ಮನಸ್ಸು ಒಂದೇ"

— ಸುಬ್ರಹ್ಮಣ್ಯ ಭಾರತೀ

ಭಾರತ ವಿವಿಧ ಜನರ, ಸಂಸ್ಕೃತಿಗಳ ಸಂಕೀರ್ಣ. 32,88000 ಚದರ ಕಿ ಲೋ ಮೀಟರ್‌ನಷ್ಟು ವಿಶಾಲ. 68 ಕೋಟಿ ಜನರು 1652 ಭಾಷೆಗಳು ಮತ್ತು ಉಪ ಭಾಷೆಗಳು ಆದರೂ ವ್ಯಕ್ತಿತ್ವ ಒಂದೇ. ಹಿಂದೂ, ಮುಸಲ್ಮಾನ, ಕ್ರೈಸ್ತ.... ಕಾಶ್ಮೀರಿ, ಗುಜರಾತಿ, ಬೆಂಗಾಲಿ, ತಮಿಳರು.... ಎಲ್ಲರೂ ಒಂದೇ. ಸಹಬಾಳ್ವೆಯಲ್ಲಿ — ಎಲ್ಲರೂ ಭಾರತೀಯರು

ಪ್ರಕಟಣೆ : ವಾರ್ತಾ ಮತ್ತು ಪ್ರಚಾರ ಇಲಾಖೆ

ಕರ್ನಾಟಕ ಸರ್ಕಾರ,

ಬೆಂಗಳೂರು.

# ಹುಣಸೂರಲ್ಲಿ ನೋವಿನ ಸಂಭ್ರಮದ ದಲಿತಕಲಾಮೇಳ

**ವಿಶೇಷ ವರದಿ**

**ಸೋಗಳ್ಳಿ ನಿಂಗನಾಯಕ'**

ಮೇ 18, 19 ರಂದು ಕರ್ನಾಟಕ ದಲಿತ ಸಂಘರ್ಷ ಸಮಿತಿಯು ಮೈಸೂರು ಜಿಲ್ಲೆಯ "ದಲಿತ ಕಲಾ ಮೇಳ" ವನ್ನು ಹುಣಸೂರಿನಲ್ಲಿ ನಡೆಸಿತು. ಬಹಳ ದಿನಗಳಿಂದ ಕೈಕೊಟ್ಟು ಮಾಯವಾಗಿದ್ದ ಮಳೆ ಬಂದು, ದಲಿತರು ತಮ್ಮ ಜೀವನಾಧಾರವಾದ ಕೂಲಿ, ಚೂರುಪಾರು ಜಮೀನಿದ್ದವರು ಉಳುಮೆ ಮಾಡುವ ಆತುರ, ಹಸಿದಹೊಟ್ಟೆಗೆ ಅರೆಗಂಜಿಯುನ್ನು ಹುಯ್ದುಕೊಳ್ಳುವ ಚಡಪಡಿಕೆ ಕೊಳೆತು ನಾರುತ್ತಿರುವ ಈ ಅಸಮಾನ ಸಮಾಜ ಕೊಂಚ ಬದಲಾಗಬಹುದೇ... ಎಂಬ ನಿರೀಕ್ಷೆ....ಈ ಎಲ್ಲ ಗಡಿಬಿಡಿಗಳ ನಡುವೆ ಕಲಾ ಮೇಳದಲ್ಲಿ ಭಾಗವಹಿಸಿ ತಮ್ಮ ನಿರಂತರ ನೋವಿನ, ಸಂಭ್ರಮದ, ಕೆಚ್ಚಿನ ಕಲಾಪ್ರದರ್ಶನ ಮಾಡುವ ಹುಮ್ಮಸ್ಸಿನಿಂದ ಜಿಲ್ಲೆಯ ನಾನಾ ಮೂಲೆಗಳಿಂದ ಇಂಥ ತೀವ್ರಕ್ಷಣಗಳಲ್ಲಿ ಕೂಡ ಸಹಸ್ರ ಸಂಖ್ಯೆಯಲ್ಲಿ ಭಾಗವಹಿಸಿದ್ದ, ಕುರುಚಲು ಗಡ್ಡದ, ಕೆಂಪು ಕಣ್ಣಿನ, ಕರಿಮಯ್ಯ ದಲಿತ ಸಮೂಹ ತನ್ನ ಎಲ್ಲಾ ಕಲಾಸಂಪತ್ತಿನ ಐಭೋಗ, ಅದ್ದೂರಿ, ಆರ್ಭಟದ ಕಾಲುಗಳನ್ನು ಹುಣಸೂರಿನ ಕರಿ ರಸ್ತೆಯ ಮೇಲೆ ಕುಣಿಸಿತು. 19 ರ ಮಧ್ಯಾಹ್ನದ ಮೂರು ಗಂಟೆಗೆ ಸಮ್ಮೇಳನದ ಕೇಂದ್ರವಾಗಿದ್ದ ವಿದ್ಯಾರ್ಥಿ ನಿಲಯದಿಂದ ಹೊರಟ ದಲಿತ ಕಲಾ ಸಮೂಹ, ಹೋರಾಟದ ಸಾಗರಕ್ಕೆ ಹರಿಯುವ ನದಿಯಂತೆ ಹುಣಸೂರಿನ ಬೀದಿ ಬೀದಿಗಳಲ್ಲಿ ಮೆರೆಯಿತು.

ಹೋರಾಟದ ಹಾಡುಗಳಿಗೆ, ಹಾಡಿನ ಲಯಕ್ಕೆ ತಕ್ಕಂತೆ ಕೋಲುಯ್ಯುತ್ತಾ, ಕಾಲು ಹಾಕುತ್ತಾ, ಚಿತ್ತ ಚಿತ್ತಾರ ನೃತ್ಯದೊಂದಿಗೆ ಮುಂದೆ ಸಾಗಿದ್ದ ಕೋಲಾಟದ ದಂಡು, ಮೈ ಪುಳಕಗೊಳ್ಳುವಂತೆ ಝಲ್ ಝಲ್ ಎಂದು ಮುಗಿಲೆತ್ತರದ ನಂದಿಕಂಬ, ಸತ್ತಿಗೆ, ಕೊಂಬು, ನೋಡುಗರ ಗುಂಡಿಗೆ ನಡುಗಿಸುತ್ತಿದ್ದ ತಮ್ಮಟೆಗಳು, ರೋಮಾಂಚನಗೊಳಿಸಿದ ಹುಲಿವೇಷದ ಕುಣಿತಗಳು, ಅತ್ಯಂತ ಶಿಸ್ತಿನಿಂದ ಧಾವಿಸುತ್ತಿದ್ದ ಮೈಲುದ್ದದ ದಲಿತ ಕಾಲುಗಳು, ಹೋರಾಟದ ಹಾಡುಗಳನ್ನು ಅತ್ಯಂತ 'ಘಟ್ಟಿ' ಯಾಗಿ ಹೇಳುತ್ತಾ–ಮೇಲೆ ಧಗಧಗಿಸುತ್ತಿದ್ದ ಸೂರ್ಯನ ತಾಪ ಮೈಯ್ಯಿಂದ ಕಿತ್ತು ಬರುತ್ತಿದ್ದ ಬೆವರನ್ನು ಮೀರಿದಂಥ ಆವೇಶದಿಂದ ಘೋಷಣೆಗಳು ಮೊಳಗುತ್ತಿದ್ದವು. "ಪ್ರಾಣವನ್ನು ಕೊಟ್ಟಾದರೂ....ನ್ಯಾಯವನ್ನು ಪಡೆಯುತ್ತೇವೆ" "ದಲಿತರ ಮೇಲಿನ ದೌರ್ಜನ್ಯಕ್ಕೆ ಧಿಕ್ಕಾರ"—"ಗೆಲ್ಲುವ ತನಕ ಹೋರಾಟ".... "ಅನ್ನ ಬಟ್ಟೆ ನೀಡದೊಂದು ರಾಜ್ಯವೇ–ರಾಜ್ಯವೇ"—"ದೇವಲಾಪುರ ಭೂಮಿ ನಮ್ಮದೋ.... ನಮ್ಮದು"–ಎಂಬಿತ್ಯಾದಿ ಕೆಂಪು ಅಕ್ಷರಗಳ ಬ್ಯಾನರ್‌ಗಳು ವ್ಯವಸ್ಥೆಯ ವಿರುದ್ಧ ದನಿ ಎತ್ತಿದ ದಲಿತ ದಂಡಿನಿಂದ ಎದ್ದು ಕಾಣುತ್ತಿದ್ದವು.

ಈ ಇಂಡಿಯಾ ಎಂಬ ದೇಶದ ನಿಜವಾದ ಕಲೆಯನ್ನು, ಎಲ್ಲ ಕಲೆಗಳಿಗೆ ಮೂಲಾಧಾರವಾದ ಜೀವಂತ ಕಲೆಯನ್ನು ವೀಕ್ಷಿಸಲು ಬೀದಿಗಿಳಿದ, ಮಹಡಿಗಳ ಮೇಲೆ ನಿಂತ, ಆತುರದಿಂದ ಓಡಿ ಬಂದು ಸೇರಿಕೊಳ್ಳುತ್ತಿದ್ದ ಹುಣಸೂರಿನ ಅಸಂಖ್ಯ ನಾಗರೀಕರು ಮೂಕ ವಿಸ್ಮಿತರಾಗಿ ನೋಡುತ್ತಿದ್ದುದು ಅಚ್ಚರಿಯೇನಲ್ಲ. "ಆಕಾಶವನ್ನು ಎತ್ತಿ ನಿಲ್ಲಿಸಿದವರ" ಕಲಾ ಸಾಮರ್ಥ್ಯ, "ಎಚ್ಚೆತ್ತ ದಲಿತ ಸಿಂಹಗಳ ಕೂಗು", ಸಂಜೆ ಐದೂವರೆ ಗಂಟೆಯ ವೇಳೆಗೆ ಪುರಭವನದ ಅಂಗಳದ ಸಭೆಗೆ ಬಂದು ಸೇರಿತು.

# ಬಡವರನ್ನು ಒಡೆದಿರುವ ಕ್ರೂರ ಜಾತಿಯನ್ನು ಕೊಲ್ಲಿರಿ

ಹುಣಸೂರಿನಲ್ಲಿನ ದಲಿಶ ಕಲಾ ಮೇಳದ ಪ್ರಥಮ ದಿನವಾದ 18–5–83ರಂದು ಬಿ. ಕೃಷ್ಣಪ್ಪನವರು ಮಾತನಾಡಿ "ಶ್ರೀಮಂತರ ಪರವಾದ ಈ ಸರ್ಕಾರದ ನಿರ್ಲಕ್ಷ್ಯದಿಂದ, ದುಡಿಯುವವರಿಗೆ ಸೇರಬೇಕಾದ ಜಮೀನು ಭೂಮಾಲೀಕರ ವಶವಾಗಿದೆ, ಇಲ್ಲಿವರೆಗಿನ ದ. ಸಂ. ಸ. ಹೋರಾಟದಿಂದಾಗಿ ಎರಡೂವರೆ ಲಕ್ಷ ಭೂಮಿ ದಲಿತರಿಗೆ ದಕ್ಕಿದೆ" ಎಂದರು. ಈ ದೇಶದ ಶೇ. 90ರಷ್ಟು ಬಡವರನ್ನು ಒಡೆದಿರುವ ಅಂಶ "ಜಾತಿ" ಎಂದ ಅವರು ನೊಂದವರೆಲ್ಲ ಸಂಘಟನೆಯಾಗ ಬೇಕಾದ್ದು ಅಗತ್ಯ ಎಂದರು. ದೇವಲಾಪುರದ ಭೂ ಹೋರಾಟವನ್ನು ಪ್ರಸ್ತಾಪಿಸಿ–ದಲಿತರು ಸರ್ಕಾರದ ಸಾಗುವಳಿ ಚೀಟಿಯನ್ನೇ ನಂಬಿ ಕೂರಬೇಕಿಲ್ಲ ಎಂದರು.

ದ. ಸಂ. ಸ. ಕಾರ್ಯಕರ್ತ ದೊಡ್ಡಣ್ಣನವರು, ಪಿರಿಯಾಪಟ್ಟಣದ ಬಸ್ಲಾಪುರ ಗ್ರಾಮದಲ್ಲಿ–ರೈತ ಸಂಘದ ಹೆಸರಲ್ಲಿ–ದಲಿತರ ಮೇಲೆ ನಡೆದ ದೌರ್ಜನ್ಯವನ್ನು ಪ್ರಸ್ತಾಪಿಸಿದರು

ಮೈಸೂರು ಜಿಲ್ಲೆಯ ಐದು ತಾಲ್ಲೂಕುಗಳಲ್ಲಿನ ದ. ಸಂ. ಸ. ಸಂಘಟನೆಯನ್ನು ಆಯಾತಾಲ್ಲೂಕು ಸಂಚಾಲಕರುಗಳು ಓದಿ, ದ. ಸಂ. ಸ ಸಂಘಟನೆಗೆ ಭೂ ಮಾಲೀಕರು, ಭ್ರಷ್ಟ ಅಧಿಕಾರಿಗಳು, ಕುತಂತ್ರ ರಾಜಕಾರಣಿಗಳು, ಪೋಲೀಸರು–ಮಾರಕವಾಗಿದ್ದಾರೆ, ದಲಿತರನ್ನು ಸಂಘಟಿಸುವುದರ ಜೊತೆಗೆ ಮೇಲಿನೆಲ್ಲರ ಹಾಗೂ ಜಾತ್ಯಾಂಧರ ವಿರುದ್ಧ ದ. ಸಂ. ಸ. ಗುದ್ದಾಡಬೇಕಾದ ನಿಷ್ಠುರ ಘಳಿಗೆಗಳು ಬರುತ್ತಲೇ ಇವೆ–ಎಂಬ ಅಂಶ ವ್ಯಕ್ತವಾಯಿತು

ರತ್ನಪುರಿ ಜಾತಿಗಲಭೆಯಲ್ಲಿ ಜೈಲುಸೇರಿ, ಇತ್ತೀಚೆಗೆ ಬಿಡುಗಡೆಯಾದ ಸಕ್ರಿಯ ಹೋರಾಟಗಾರ ರಾಮಸ್ವಾಮಿ ನಾಯ್ಕರ್ ಮಾತನಾಡಿ "ದಲಿತರು ಭೂ ಹೋರಾಟ ಮಾಡಬೇಕಾದ್ದು ಅನಿವಾರ್ಯ ಅಗತ್ಯವಾಗಿದೆ, ಇಲ್ಲಿ ನಮ್ಮ ಭವಿಷ್ಯ ಅಡಗಿದೆ" ಎಂದರು.

"ದ. ಸಂ. ಸ. ದ ಸಹಾಯ ಪಡೆದು ಹೋರಾಡದಿದ್ದರೆ ನಮ್ಮ ಸೈಟುಗಳು ನೂರುವರ್ಷಗಳಾದರೂ ದಕ್ಕುತ್ತಿರಲಿಲ್ಲ" ಎಂದು ಪ್ರಸ್ತಾಪಿಸಿ ತಗಡೂರಿನ ಕೂಸಯ್ಯನವರು ಮಾತನಾಡಿದರು.

ಹಳ್ಳಿಗಾಡ ಅವಿದ್ಯಾವಂತ ದಲಿತರು, ವಿದ್ಯಾವಂತರುಗಳನ್ನೇ ನಂಬಿಕೂರಬೇಕಾಗಿಲ್ಲ; ನಮಗೂ ಹಕ್ಕಿದೆ, ಮೋಸ ಆದಾಗ ನಾವು ಘರ್ಜಿಸಬೇಕು, ನ್ಯಾಯಕ್ಕಾಗಿ ಹೋರಾಡುತ್ತಿರುವ ನಾವು ಯಾವ ಭ್ರಷ್ಟ ಅಧಿಕಾರಿಯ ವಿರುದ್ಧ ದನಿಯೆತ್ತುವ ತಾಖತ್ತು ಪಡೆಯಬೇಕೆಂದು, ಅಂಬೇಡ್ಕರ್‌ರವರ ತತ್ವಗಳನ್ನು ಆಧಾರವಾಗಿಟ್ಟುಕೊಂಡು ದಲಿತರ ಹೋರಾಟದ ಕಣಕ್ಕಿಳಿಯಲೇ ಬೇಕೆಂದರು.

---

'ಪಂಚಮ' ಪತ್ರಿಕೆಗೆ ಏಜೆಂಟರಾಗಬಯಸುವವರು ಕೂಡಲೇ ಕೆಳಗಿನ ವಿಳಾಸಕ್ಕೆ ವ್ಯವಹರಿಸಿರಿ :

—ಮಾರಾಟ ನಿರ್ವಾಹಕ
ಪಂಚಮ ಪತ್ರಿಕೆ
ಚೇತನ ಕನ್ನಡ ಸಂಘ
ಚಾಮರಾಜ ಜೋಡಿ ರಸ್ತೆ, ಮೈಸೂರು.

---

# 'ನಮ್ಮೊಳಗಿನ ಕಲೆ ನಮ್ಮನ್ನು ಉಳಿಸಿದೆ'

ಹುಣಸೂರಿನಲ್ಲಿ ನಡೆದ ದ. ಸಂ. ಸ. ಜಿಲ್ಲಾ ದಲಿತ ಕಲಾಮೇಳದ ಅಂತಿಮ ದಿನವಾದ ಮೇ. 19 ರಂದು ಚರ್ಚಿತವಾದ ವಿಚಾರಗಳ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ,

ನಮ್ಮಲ್ಲಿ ಬಡತನವಿದೆ, ಹಸಿವಿದೆ. ಪ್ರಪಂಚಕ್ಕೇ ಕೊಟ್ಟು ಮಿಗುವಷ್ಟು ಅವಮಾನವಿದೆ. ನಮ್ಮೊಳಗಿರುವ ಕಲೆ ನಮ್ಮನ್ನು ಇಲ್ಲಿತನಕ ಉಳಿಸಿಕೊಂಡು ಬಂದಿದೆ. ನಮ್ಮ ನೋವಿಗೆ, ಹೋರಾಟಕ್ಕೆ ಕಲೆಯನ್ನು ಸೇರಿಸಬೇಕಾಗಿದೆ.

**—ದೇವನೂರು ಮಹಾದೇವ**

## ದಲಿತಕಲೆ ಹೋರಾಟದ ಕಲೆಯಾಗಬೇಕು

ಈ ದೇಶದಲ್ಲಿ ಹೊಸ ಪ್ರಜ್ಞೆ ಹುಟ್ಟಿದೆ. ಇದು ಆಕಸ್ಮಿಕವಲ್ಲ. ಶೋಷಣೆಗೊಳಗಾದ ಜನ ಹೋರಾಡುತ್ತಿರುವುದು ಎಲ್ಲಾ ರಾಜ್ಯಗಳಲ್ಲೂ ಕಂಡು ಬರುತ್ತಿದೆ. ಸಾವಿರಾರು ವರ್ಷಗಳಿಂದ ಸಹಿಸಿಕೊಂಡಿದ್ದವರು ಇಂದು ತಿರುಗಿ ಬೀಳ್ತಿದ್ದಾರೆ. ಜೀವಿತದಲ್ಲೇ ದಲಿತರ ರಕ್ತ ಹೀರುತ್ತಿರುವ ಮೇಲ್ವರ್ಗದವರು, ಸತ್ತ ದಲಿತ ಹೆಣದ ಮೇಲೂ ಸೇಡು ತೀರಿಸಿಕೊಳ್ಳಲು ನೋಡ್ತಾರೆ. (ಉದಾ : –ದಲಿತರು ಸತ್ತರೆ ಅವರ ಮುಖವನ್ನು ಕೆಳಗೆ ಮಾಡಿ ಹೂಳಬೇಕೆಂಬ ನಿಯಮ) "ಅಸ್ಪೃಶ್ಯತೆ" ಅನ್ನೋದು ಸರ್ವಾಂತರ್ಯಾಮಿಯಾಗಿಬಿಟ್ಟಿದೆ. 3000 ವರ್ಷಗಳಿಂದ ಶೋಷಿಸಿದ ಜನ ಇವತ್ತು ಅದರ ಫಲ ಉಣ್ಣಲೇಬೇಕು. ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ನಮ್ಮನ್ನು ತುಳಿಯುವುದಕ್ಕೆ ಈ ಮೇಲ್ವರ್ಗದ ಜನರಿಗೆ ಯಾರು ಅಧಿಕಾರ ಕೊಟ್ಟರು ? 'ಜಾತಿ' ಕಲ್ಪನೆಯು ಕೇವಲ ಭ್ರಮೆ ! ಪ್ರಪಂಚದ ಇತರೇ ರಾಷ್ಟ್ರಗಳು ಏನೆಲ್ಲಾ ಸಂಶೋಧಿಸಿ ಉಪಕಾರ ಮಾಡಿದ್ದಾರೆ. ಆದರೆ ಈ ಇಂಡಿಯಾದವರು 'ಜಾತಿ'ಯನ್ನು ಸಂಶೋಧಿಸಿ ಪ್ರಪಂಚಕ್ಕೇ ಅಂಟಿಸುತ್ತಿದ್ದಾರೆ ! ಇದು ತೀರಾ ಅವಮಾನದ ವಿಚಾರ, ಮೇಲ್ಜಾತಿಯ ಕಿರಿಯನೊಬ್ಬ–ವಯಸ್ಸಾದ ದಲಿತನನ್ನು ಏಕ ವಚನದಲ್ಲಿ ಮಾತಾಡಿಸ್ತಾನೆ, ಆದರೆ ಅದೇ ಅನುಭವಿಯಾದ ದಲಿತ ಮೇಲ್ಜಾತಿಯ ಕಿರಿಯನನ್ನು ಬಹು ವಚನದಲ್ಲಿ ಸಂಭೋದಿಸಬೇಕು. ಇದು ಈ ದೇಶದ ದುರಂತ. ಇನ್ನು ಮುಂದೆ ದಲಿತರು "ಏಕವಚನಕ್ಕೆ ಏಕವಚನ, ಬಹುವಚನಕ್ಕೆ ಬಹುವಚನ" ತತ್ವ ಹಿಡಿಯಬೇಕು. ಈ ದೇಶದ ಸಮಗ್ರ ಬದಲಾವಣೆಗಾಗಿ, ಆರ್ಥಿಕ ಸ್ವಾತಂತ್ರ್ಯಕ್ಕಾಗಿ ನಾವು ಹೋರಾಡಬೇಕಾಗಿದೆ. ಈಗ ನಮಗಿರುವುದು, ಅಪರಿಪೂರ್ಣ ಸ್ವಾತಂತ್ರ್ಯ. ಆದ್ದರಿಂದಲೇ ಆಗಸ್ಟ್ 15 ರಂದು ನಾವು 'ಕರಾಳ ದಿನಾಚರಣೆ' ಮಾಡಬೇಕಾಗಿರುವುದು, ಪುರೋಹಿತಶಾಹಿಯನ್ನು ಪ್ರತಿನಿಧಿಸುವ ಮಠಾಧಿಪತಿಗಳು ದೇಶಕ್ಕೆ ಮಾರಕವಾಗಿದ್ದಾರೆ. ಪುರಾಣದ ಎಲ್ಲ ಢೋಂಗಿಗಳನ್ನು, ಜನವಿರೋಧಿ ತತ್ವಗಳನ್ನು ನಾವು ಬಯಲು ಮಾಡಬೇಕಾಗಿದೆ. ನಮ್ಮ ಹೋರಾಟಕ್ಕೆ ಅಡ್ಡಿಯಾಗಿರುವ "ಮಧ್ಯವರ್ತಿಗಳು, ಸರ್ಕಾರದ ಸುಳ್ಳು ಪ್ರಚಾರ, ದೇವರು ಧರ್ಮದ ಹೆಸರಲ್ಲಿ ದಾರಿತಪ್ಪಿಸುವವರು, ನಮ್ಮ ಮೇಲೇ ತಪ್ಪು ಹೊರಿಸಿ ದಿಕ್ಕೆಡಿಸುವವರು" ಈ ಎಲ್ಲ ಖೂಳ ಕಾಲುಗಳನ್ನು ಮೀರಿ ಸಂಘಟಿತರಾಗಿ ಹೋರಾಡಬೇಕು. ದಲಿತ ಕಲೆಯಲ್ಲಿನ ಕೆಲ ಮೌಢ್ಯತೆಗಳನ್ನು ಬಿಟ್ಟು, ಹೋರಾಟಕ್ಕೆ ಅದನ್ನು ಬಳಸಿಕೊಳ್ಳಬೇಕು.

**—ಸಿದ್ಧಲಿಂಗಯ್ಯ**

## ನಾಗರೀಕತೆಯ ಹೆಸರಿನಲ್ಲಿ ಅತ್ಯಾಚಾರ

ದಲಿತರನ್ನು ತುಳಿಯುತ್ತಾ ಬಂದ ಮೇಲ್ವರ್ಗದವರಿಗೆ ಮಾತ್ರ ಇಂದು ಸಾಂಸ್ಕೃತಿಕವಾಗಿ 'ಅನುಕೂಲ' ಇರುವುದು. ಇವರು ದಲಿತರ ಮೇಲೆ ತಮ್ಮದೇ ಆದ 'ಕುರುಡುತತ್ವ'ಗಳನ್ನು ಹೇರುತ್ತಾ ಬಂದಿದ್ದಾರೆ. ಇದರಿಂದ ಸ್ವಾರ್ಥ ಸಾಧಿಸಿಕೊಂಡ ಮೇಲ್ಜಾತಿಯವರು, ದಲಿತರ ಇಂದಿನ ದುಃಸ್ಥಿತಿಗೆ ಕಾರಣರಾಗಿದ್ದಾರೆ. ಇದು 'ನಾಗರೀಕತೆಯ' ಹೆಸರಲ್ಲಿ ಎಸಗಿದಂಥ 'ಅತ್ಯಾಚಾರ'. ಇಂದು ದುಡಿಯುತ್ತಿರುವ ದಲಿತವರ್ಗಕ್ಕೆ ಆಸ್ತಿಯಿಲ್ಲದೆ, "ಬದುಕಿದರೆ ಸಾಕು" ಅನ್ನುವಂತಾಗಿದೆ. ಇದಕ್ಕಿಂತ ಅಮಾನುಷ್ಯವಾದದ್ದು ಮತ್ತೊಂದಿಲ್ಲ. ಈ ದೇಶದಲ್ಲಿ ಮೇಲ್ಜಾತಿಯವರಿಗೆ ಭದ್ರವಾದ ಧಾರ್ಮಿಕ ಕ್ರಿಯೆಗಳಿವೆ. ಇದರ ಪರಿಣಾಮ ಮದುವೆ ಮುಂತಾದ ಸಮಾರಂಭಗಳಲ್ಲಿ-ಛತ್ರದ ಹೊರಗೆ-ಎಂಜಲೆಲೆಗೆ ಮುತ್ತುವ, ಕೆಲಸಾರಿ ನಾಯಿಗಳೊಂದಿಗೆ ಹೋರಾಡಬೇಕಾದಂತ ದೀನ ಜನತೆಯ ಕರುಳು ಹಿಂಡುವ ಚಿತ್ರ ದಲಿತರು ಇಂಥ ಕಂದಕದಲ್ಲಿರುವ ತನಕ 'ಅವರು' ಸುಖವಾಗಿರ್ತಾರೆ. ಇಂದಿನ ಪ್ರಜಾಪ್ರಭುತ್ವದಲ್ಲಿ 'ಫ್ಯೂಡಲಿಸಂ' ಬೆಳೆದು ಬಂದು, ಶ್ರೀಮಂತರನ್ನು ರಕ್ಷಿಸುವ ಕೆಲಸ ಮುಂದುವರಿದಿದೆ.

ದಲಿತ ಕಲೆಗೆ ಸಂಬಂಧಿಸಿದ ವಾದ್ಯಗಳನ್ನು ಮೇಲ್ಜಾತಿಯವರು ತಯಾರಿಸುವುದಿಲ್ಲ. ಅದನ್ನವರು ಮುಟ್ಟುವುದೂ ಇಲ್ಲ. ಆದರೆ 'ಅವರ' ಕುಣಿತಕ್ಕೆ, 'ಅವರ' ಸಮಾರಂಭಗಳಿಗೆ ದಲಿತರು ವಾದ್ಯ ಬಾರಿಸಬೇಕು. ಶೋಷಣೆಯ ಈ ಸೂಕ್ಷ್ಮತೆಯನ್ನು ಅರ್ಥಮಾಡಿಕೊಂಡು ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಬಲವಾದ ಹೋರಾಟವನ್ನೇ ಮಾಡಬೇಕು.

**—ಕೆ. ವೆಂ. ರಾಜಗೋಪಾಲ**

## ಕಲೆ ಹುಟ್ಟಿದ್ದು ದಲಿತರಲ್ಲೇ

ಕಲೆಗಳನ್ನು ಸಂರಕ್ಷಿಸಿಕೊಂಡು ಬಂದವರು ದಲಿತರು ಮಾತ್ರ. 'ಕಲೆ' ಹುಟ್ಟಿದ್ದು ದಲಿತರಲ್ಲಿ. ಕಲೆ ಅನ್ನೋದು ಯಾವನು ದುಡಿಯುತ್ತಾನೋ ಅವನಿಂದಲೇ ಹುಟ್ಟಿದಂಥದ್ದು. ಆದಿ ಕವಿ ವಾಲ್ಮೀಕಿ, ವ್ಯಾಸ ಇವರೆಲ್ಲ ಶೂದ್ರರೆ–ವಾಸ್ತುಶಿಲ್ಪ. ಸಂಗೀತ. ನೃತ್ಯ ಎಲ್ಲದರಲ್ಲಿ ಈ ದೇಶ ಹೆಸರು ಮಾಡಿದ್ದರೆ ಅದಕ್ಕೆ ಕಾರಣ ಶೂದ್ರರು. ನಾಟ್ಯಕಲೆಯು ಹಿಂದೆ ಶೂದ್ರರಾದ ದೇವದಾಸಿಯರಿಗೆ ಮೀಸಲಾಗಿತ್ತು. ಈ ಕಲೆಗೆ 'ಬೆಲೆ' ಬರತೊಡಗಿದಾಗ ಮೇಲ್ಜಾತಿಯವರು ಅದನ್ನೇ ಅಪ್ಪಿಕೊಂಡು ಅದರ ಲಾಭ ಪಡೆಯುತ್ತಿದ್ದಾರೆ. ಕಲೆಗಾಗಿ ಶ್ರಮ ದಲಿತರದು, ಅದರ ಲಾಭ ಮೇಲ್ವರ್ಗದವರದು. ಇದು ಈ ದೇಶದ ದುರಂತ. ಇದು ನಮ್ಮ ಅರಿವಿನಿಂದ ಬದಲಾಗಬೇಕಾಗಿದೆ. "ನೀಗ್ರೋ" ಗಳು ಎಷ್ಟೇ ದಾಸ್ಯದಲ್ಲಿ ಬೆಂದರೂ ಹಾಡುವ, ಕುಣಿಯುವ ಅವರದೇ ಆದ ಕಲೆಯನ್ನು ರೂಢಿಸಿಕೊಂಡು ಬಂದರು. ವಿಮೋಚನೆ ಕಂಡರು. ಇದೇ ಈಗ ಜಗತ್ತಿನ ಶ್ರೇಷ್ಠವಾದಂಥ "ಜಾಸ್" ಕಲೆ. ಈ ದೇಶದ ದಲಿತ ಕಲೆಗಳು ಸನಾತನವಾದವು. ಮೇಲ್ವರ್ಗದವರ ಸಮಾರಂಭಗಳಿಗೆ ಸಂಗೀತ ನುಡಿಸುತ್ತಾ ಬಂದವರು ದಲಿತರು. ಇದನ್ನು ಮಾನ್ಯತೆ ಮಾಡುವ ಔದಾರ್ಯ ಅವರಲ್ಲಿಲ್ಲ. ಈ ಕಲೆಯನ್ನು ಬೆಳೆಸಿಕೊಳ್ಳುವುದು ದಲಿತರ ಘನತೆಯ ವಿಷಯ. ಕಲೆ ದಲಿತ ಜೀವನದಲ್ಲಿ ಸ್ವಾಭಾವಿಕವಾಗಿಯೇ ಹಾಸುಹೊಕ್ಕಾಗಿದೆ. ನಮ್ಮೆಲ್ಲರ ಜವಾಬ್ದಾರಿಯೆಂದರೆ ದಲಿತ ಕಲೆಯನ್ನು ರೂಢಿಸಿಕೊಂಡು. ವಿಮೋಚನೆ ಸಾಧಿಸುವಲ್ಲಿ ಹೋರಾಟ ಮಾಡಬೇಕಾಗಿರುವುದು. ದ. ಸಂ. ಸ. ದಲ್ಲಿ ನಾನು ಮುಖ್ಯವಾಗಿ ಗುರ್ತಿಸಿದ ವಿಶೇಷತೆಯೆಂದರೆ ಕಲಾಮೇಳಗಳು. ಈ ಕಲೆಗಳಿಂದ ಖಂಡಿತವಾಗಿ ಕ್ರಾಂತಿಯನ್ನೇ ಮಾಡಬಹುದು.

**—ಪೋಲಂಕಿ ರಾಮಮೂರ್ತಿ**

ಪಂಚಮ ಪತ್ರಿಕೆಯ ವಾರ್ಷಿಕ ಚಂದಾ : 10 ರೂಪಾಯಿ
ಪತ್ರಿಕೆಯ ವಿಳಾಸಕ್ಕೆ ಎಂ. ಒ. ಮಾಡಿರಿ

ಸಂಪಾದಕ, ಪ್ರಕಾಶಕ : ಗೋವಿಂದಯ್ಯ, ವಿನಯ ಪ್ರಿಂಟರ್ಸ್, 2514, ಕೆ. ಜಿ. ಕೊಪ್ಪಲು, ಮೈಸೂರು–14.